

## ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.



# ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆ

ಭಕ್ತರ ಹಾಗೂ ದಾನಿಗಳ ದಾನಸ್ವೀಕರಣೆಯಿಂದ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಯನ್ನು ಆರಂಭಗೊಳಿಸಲಾಗಿದೆ

ಈ ಯೋಜನೆಗೆ ದಾನ ನೀಡಬಯಸುವ ಭಕ್ತರು ರೂ. 50,000/- ಅಥವಾ ಅದರ ಗುಣಕಗಳಲ್ಲಿ ನೀಡಬಹುದು ವ್ಯಕ್ತಿ/ಇಬ್ಬರಿಗೆ ಮೀರದಂತೆ, ಒಂದು ಕುಟುಂಬ / ಎರಡು ಕಂಪನಿ ಅಥವಾ ಉದ್ದಿಮೆಗಳು - ಈ ದಾನಗಳನ್ನು ನೀಡಬಹುದು. ಅವರಿಗೆ ದೊರೆಯುವ ಸೌಲಭ್ಯಗಳು ಹೀಗಿರುತ್ತವೆ-

1. ದಾನಿಗಳ ಹೆಸರನ್ನು ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷ ಗಳು ಪ್ರಧಾನವಾಗಿ ಎದ್ದು ಕಾಣುವಂತೆ ಬರೆದು ಇಡಲಾಗುವುದು.
2. ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಅರ್ಚನೆಯ ಸಮಯದಲ್ಲಿ ದಾನಿಗಳ ಗೋತ್ರವನ್ನು ಹೇಳಲಾಗುವುದು.
3. ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಕಾಲ ವರ್ಷಕ್ಕೆ ಒಂದು ಸಲ ಸರ್ವದರ್ಶನ ಸಮಯದಲ್ಲಿ ವಿಶೇಷ ಪ್ರವೇಶದ ಮೂಲಕ ಐದುಮಂದಿಗೆ ಉಚಿತ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳು ಮೊದಲಬಾರಿಗೆ ಶ್ರೀ ಪದ್ಮಾವತೀ ಅಮ್ಮನವರನ್ನು ದರ್ಶಿಸಲು ಬಂದಾಗ ಅವರಿಗೆ ಒಂದು ಅಂಗವಸ್ತ್ರವನ್ನು ಬಹೂಕರಿಸಲಾಗುವುದು.

ಭಕ್ತರು ರೂ. 1000/- (ಒಂದು ಸಾವಿರ ರೂಪಾಯಿ) ಹಾಗೂ ಗುಣಕಗಳಲ್ಲಿ ಸಹ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಗೆ ದಾನಗಳನ್ನು ನೀಡಬಹುದು. ಅವರಿಗೆ ವರ್ಷಕ್ಕೆ ಒಮ್ಮೆ ಒಬ್ಬರಿಗೆ ಉಚಿತ ದರ್ಶನವನ್ನು ಏರ್ಪಡಿಸಿ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದದೊಡನೆ ಕುಂಕುಮ ಪ್ರಸಾದವನ್ನು ನೀಡಲಾಗುವುದು.

ಈ ಯೋಜನೆಗೆ ದಾನವಾಗಿ ನೀಡಬಹುದಾದ ಕನಿಷ್ಠ ಧನರಾಶಿ ಯೆಂದರೆ ರೂ 1000/- (ಒಂದು ಸಾವಿರ ರೂಪಾಯಿ) ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಪಡೆದು, ಸಹಾಯಕ ಕಾರ್ಯನಿರ್ವಹಣಾಧಿಕಾರಿ, ಶ್ರೀ ಪದ್ಮಾವತೀ ಅಮ್ಮನವರ ಆಲಯ, ತಿರುಚಾನೂರು - ಚಿತ್ತೂರುಜಿಲ್ಲೆ - 517 503 - ಈ ವಿಳಾಸಕ್ಕೆ ಕಳುಹಿಸಬಹುದು ರೂ. 1000/- ಕ್ಕಿಂತ ಕಡಿಮೆ ಮೊತ್ತದ ಧನದಾನಗಳನ್ನು ದಾನಿಗಳಿಗೆ ಯಾವುದೇ ನಿರೂಪಣೆಯನ್ನೂ ನೀಡದೆ ಶ್ರೀ ಪದ್ಮಾವತೀ ಅಮ್ಮನವರ ನಿತ್ಯಾನ್ನ ಪ್ರಸಾದ ಯೋಜನೆಯಲ್ಲಿ ಸೇರಿಸಲಾಗುವುದು

*ಈ ಯೋಜನೆಯ ಹೆಚ್ಚಿನ ವಿವರಗಳನ್ನು ಪಡೆಯಬಹುದಾದ ವಿಳಾಸ -*

**ಸಹಾಯಕ ಕಾರ್ಯನಿರ್ವಹಣಾಧಿಕಾರಿ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ**
**ತಿರುಚಾನೂರು - 517 503**
**ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ್**

**ಕಾರ್ಯನಿರ್ವಹಣಾಧಿಕಾರಿ,**
ತಿ. ತಿ. ದೇವಸ್ಥಾನಗಳು.



ಇಂದು ಎನಗೆ ಗೋವಿಂದ ನಿನ್ನಯ ಪಾದಾರ
ವಿಂದವ ತೋರೋ ಮುಕುಂದನೆ - ಪ. -

ಮಂದರೋದ್ಧಾರನೆ ನಂದಗೋಪಿಯ ಕಂದ
ಇಂದಿರಾ ರಮಣನೆ ಗೋವಿಂದ ಗೋಕುಲಾನಂದ - ಅ ಪ -

ನೊಂದೆನಯ್ಯಾ ಭವಬಂಧನದೊಳು ಸಿಲುಕಿ
ಮುಂದೆ ದಾರಿ ಕಾಣದೆ ಕುಂದಿದೆ ಜಗದೊಳು
ಕಂದ ನಾನೆಂದೆನ್ನ ಕುಂದುಗಳ ನೆಣಿಸದೆ
ತಂದೆ ಕಾಯೋ ನೀ ಕಂದರ್ಪ ಜನಕನೆ - ೧ -

ಮೂಢತನದಿ ಬಲು ಹೇಡಿ ಜೀವನನಾಗಿ
ದೃಢಭಕ್ತಿಯ ಮಾಡಲಿಲ್ಲವೊ ಹರಿಯೇ
ನೋಡಲಿಲ್ಲವೊ ನಿನ್ನ ಪಾಡಲಿಲ್ಲವೊ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಡೆನೊ ಸ್ವಾಮಿ - ೨ -

ಧಾರುಣಿಯೊಳು ಬಲುಭಾರ ಜೀವನನಾಗಿ
ಮೇರೆದಪ್ಪಿ ನಡೆದು ಸೇರಿದೆ ಕುಜನರ
ಆರೂ ಕಾಯುವರಿಲ್ಲ ಸೇರಿದೆ ನಿನಗೆಲ್ಲ
ಧೀರ ವೇಣುಗೋಪಾಲ ಪಾರುಗಾಣಿಸೊ ಸ್ವಾಮಿ - ೩ -

**- ಶ್ರೀ ಶ್ರೀ ರಾಘವೇಂದ್ರಸ್ವಾಮಿಜೀ.**







# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

# ತಿರುಮಲೆ

ಸಂದರ್ಶಿಸಿ



ಆನಂದಿಸಿ

# ವಾರ್ಷಿಕ ಬ್ರಹ್ಮೋತ್ಸವಗಳು

## 12-9-99 ರಿಂದ 21-9-99 ವರೆಗೆ

ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 12-9-99 | ಭಾನುವಾರ | - | ಅಂಕುರಾರ್ಪಣೆ, ಸೇನಾಪತಿ ಉತ್ಸವ |
| 13-9-99 | ಸೋಮವಾರ | ಧ್ವಜಾರೋಹಣ | ದೊಡ್ಡಶೇಷವಾಹನ |
| 14-9-99 | ಮಂಗಳವಾರ | ಚಿಕ್ಕಶೇಷವಾಹನ | ಹಂಸವಾಹನ |
| 15-9-99 | ಬುಧವಾರ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 16-9-99 | ಗುರುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 17-9-99 | ಶುಕ್ರವಾರ | ಮೋಹಿನೀ ಅವತಾರ | **ಗರುಡವಾಹನ** |
| 18-9-99 | ಶನಿವಾರ | ಹನುಮಂತವಾಹನ<br>ಸಂಜೆ **ಸುವರ್ಣರಥ**<br>ವಸಂತೋತ್ಸವ | ಗಜವಾಹನ |
| 19-9-99 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 20-9-99 | ಸೋಮವಾರ | **ರಥೋತ್ಸವ** | ಅಶ್ವವಾಹನ |
| 21-9-99 | ಮಂಗಳವಾರ | ಅವಭೃಥ, ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ. ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಭಗವದ್ಗೀತಾ ಪಠಣ, ಪುರಾಣ ಪ್ರವಚನ, ಧಾರ್ಮಿಕೋಪನ್ಯಾಸಗಳು, ಸಂಗೀತ, ಹರಿಕಥೆ ಮೊದಲಾದ ಭಕ್ತಿ ಕಾರ್ಯಕ್ರಮಗಳು ನಡೆಯುತ್ತವೆ ತಿ ತಿ ದೇ ಧಾರ್ಮಿಕ ಕೃತಿಗಳ ಮಾರಾಟದ ಏರ್ಪಾಡುಗಳೂ ಆಗಿರುತ್ತವೆ.

**ತಾವೂ ಬನ್ನಿ** **ತಿ.ತಿ.ದೇ.** **ತಮ್ಮವರನ್ನೂ ಕರೆತನ್ನಿ**




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 30 ಆಗಸ್ಟ್ 1999 ಸಂಚಿಕೆ - 3



ಮುಖಚಿತ್ರ : ಗರುಡವಾಹನ - ಚಿತ್ರ - ಡಾ|| ಕೆ. ಜಗದೀಶ್.
ಹಿಂಬದಿಯಲ್ಲಿ : ವಿಖನಸ ಮಹರ್ಷಿ - ಚಿತ್ರ - ನಾರಾಯಣಗಿರಿ ದತ್ತು.



ಲೇಖನ/ ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**




ಭಗವಂತನನ್ನು ಪುರುಷೋತ್ತಮ ಎಂದು ಕರೆದರು, ದೇವ ಮಾನವ ಯಕ್ಷ ಕಿನ್ನರ ಜಂತು ಜಾತಿಗಳ ಲಿಂಗಭೇದವನ್ನು ಮನಸ್ಸಿನಲ್ಲಿರಿಸಿಕೊಂಡು ಇರುವ ಇರಬಹುದಾದ ಪುರುಷರೊಂದಿಗೆ ಹೋಲಿಸಿ ನೋಡಿದಾಗ. ಆತ ಒಬ್ಬನೇ ಪುರುಷ ಎಂದದ್ದು - ಉಳಿದಿದ್ದು ಎಲ್ಲವೂ ಪ್ರಕೃತಿಯೇ ಅಥವಾ ಮಾಯೆ ಎಂಬುದರ ಹಿನ್ನೆಲೆಯಲ್ಲಿ. ಇನ್ನೂ ಒಂದು ರೀತಿಯ ಸಾಪೇಕ್ಷ ಸಿದ್ಧಾಂತವಿದೆಯೆಂದರೆ ಅದು ಆತ ಪುರುಷ, ಸ್ತ್ರೀಪ್ರಾಯ ಮಿತರಂ ಜಗತ್ - ಎಂಬುದು. ಈ ಸತಿ ಪತಿ ಭಾವ - ನಾಯಕ ನಾಯಕೀಭಾವ - ಜೀವ ಸತಿ ದೇವ ಪತಿ - ಭಾವದಲ್ಲಿನ ಅಭಿವ್ಯಕ್ತಿ ಮಾನವಾನುಭವದ ಎಲ್ಲ ಸಾಹಿತ್ಯದಲ್ಲೂ ಎಲ್ಲ ಭಾಷೆಯಲ್ಲಿಯೂ ನಡೆದಿರುವುದೇ ಎಂಬುದನ್ನು ಸುತ್ತ ಒಮ್ಮೆ ತಿರುಗಿ ನೋಡಿದರೆ ಗಮನಿಸಬಹುದು

ಶ್ರೀಕೃಷ್ಣ ಗೋಪಿಯರ ಸಂಬಂಧದಲ್ಲಿ ಈ ಭಾವ - ಜೀವಸತಿ, ದೇವಪತಿ - ಭಾವ ಸ್ಫುಟವಾಗಿ ತೆರೆದು ತೋರುತ್ತದೆ. ಆಳ್ವಾರರು ವಾಗ್ಗೇಯಕಾರರಿಗೆ ನಾಯಕೀ ಭಾವದ ಅನುಭಾವ ಆಗೊಮ್ಮೆ ಈಗೊಮ್ಮೆ ಆಗಿರಬಹುದಾದರೂ ಅವೇನು ಸ್ಥಾಯಿ ಭಾವವಾಗಿರಲಿಲ್ಲವೆಂಬುದನ್ನು ಅವರುಗಳ ಸಾಹಿತ್ಯದಿಂದಲೇ ತಿಳಿಯಬಹುದು. ಪರಾಂಕುಶ ನಾಯಕಿಯಾಗಿ ವಕುಳ ಭೂಷಣ ನಾಯಕಿಯಾಗಿ - ನಮ್ಮಾಳ್ವಾರರು ಕಂಡುಬಂದರೂ, ಗೋದಾದೇವಿ ಎಂದು ಕರೆಯಲ್ಪಟ್ಟ ಶ್ರೀವಿಷ್ಣುಚಿತ್ತ ನಂದನವನ ಕಲ್ಪವಲ್ಲಿಗೆ ತಾನು ಸಹಜ ಹೆಂಗಸಾಗಿದ್ದುದು ಹೆಚ್ಚಿನ ಸೌಲಭ್ಯವನ್ನೇ ಒದಗಿಸಿತು ಎನ್ನದೇಕು. ನಂತರ ಬಂದ ಅಕ್ಕ ಮಹಾದೇವಿ ಮೀರಾದೇವಿ ಮೊದಲಾದವರಿಗೂ ಈ ಒಂದು ಸುಲಭದ ಹಾದಿ - ಮಧುರ ಭಕ್ತಿಯ ರಾಜಮಾರ್ಗ ಮುಕ್ತವಾಗಿ ತೆರೆಯಲ್ಪಟ್ಟಿದ್ದಿತೆಂಬುದನ್ನು ಅವರ ಸಾಹಿತ್ಯಾವಲೋಕನದಿಂದ ತಿಳಿಯಲುಂಟು

ಇಲ್ಲಿ ಇನ್ನೊಂದು ಅಂಶವನ್ನೂ ಮನಗಾಣದೇಕು. ಆತ - ಎಲ್ಲರು ಹುಡುಕುತ್ತಿರುವ - ಯಾರಿಗೂ ಕೈಗೆಟುಕದೆ ಮರೆಯಲ್ಲಿ ನಿಂತು ನಗುವ ಆ ಹಿರಿಯನನ್ನು - ಪುರುಷ ಎಂದು ಕರೆದು ಅವನಿಗೆ ಸರ್ವಸ್ವವನ್ನು ಒಪ್ಪಿಸಿ ನಿಂತಾಗ ಒದಗುವ ಒಂದು ಸುಲಭಸಾಧ್ಯವಾದ ಮುಕ್ತಿಯ ಸಧ್ಯಃ ಪರನಿರ್ವೃತ್ತಿಯ ಅನುಭವ. 'ದಿವವನಿಲ್ಲಿ ಈ ಬುವಿಗೇ ಎಳೆದು ಸೆಳೆದು ತರುವ' ಮಾನವ ಪ್ರಯತ್ನ ಅದು ಸ್ತ್ರೀ ರೂಪದಲ್ಲಿ, ಜೀವಸತಿ ಭಾವದಲ್ಲಿ ಸಾರ್ಥಕವಾದರೆ ಎಂತಹ ಊನವೂ ನ್ಯೂನವೂ ಇಲ್ಲವೆಂದೇ ಹೇಳದೇಕು ಆ ಮೂಲಕವಾಗಿ ಸ್ವಾಮಿಯ ಹತ್ತಿರಕ್ಕೆ ಒಂದು ಹೊಸ ಮಾರ್ಗ ತೆರೆದಂತೆ ಆಗುವುದಿಲ್ಲವೇ?

ಆಂಡಾಳ್ ತಿರುವಾಡಿಪೂರದ ಶುಭಸಂದರ್ಭದಲ್ಲಿ ಆಕೆ ಕನಸುಕಂಡು ನನಸಿನಲ್ಲಿ ವರಿಸಿದ ಶ್ರೀರಂಗನಾಥನನ್ನು ಮನಸ್ಸಿನಲ್ಲಿ ಸ್ಮರಿಸಿ ಆ ದೇವವಧುವಿನ ಹಾದಿಯತ್ತ ಮನ ಹರಿಸಿದಲ್ಲಿ ನಮಗೂ ಇಹ ಜೀವನದ ಜಂಜಡದಲ್ಲಿ ಸಾಂತ್ವನ ದೊರೆತೀತು

ತಿರುವಾಡಿಪ್ಪೂರತ್ತಿಲ್ ಶೆಹತ್ತು ದಿತ್ತಾಳ್ ವಾಳಿಯೇ
ತಿರುಪ್ಪಾವೈ ಮುಪ್ಪದುಂ ಶೆಪ್ಪಿನಾಳ್ ವಾಳಿಯೇ



# ಸಂಧ್ಯಾವಂದನೆಯ ಮಹತ್ವ

- ಕಲ್ಯಾಣಿಮೂರ್ತಿ

ನಮ್ಮ ನಿತ್ಯಕರ್ಮಗಳನ್ನು ಕಡ್ಡಾಯವಾಗಿ ಮಾಡಿಕೊಂಡು ಬರಬೇಕೆಂದು ವೇದಗಳು ಸಾರುತ್ತವೆ. ಇದು ವೇದ ಮಾತೆಯ ಆಜ್ಞೆ. ಈ ನಿತ್ಯಕರ್ಮಗಳೆಂದರೇನು? ಅವು ಯಾವುವು? ಅವುಗಳೇ ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ದೇವತಾಪೂಜೆ. ಅತಿಥಿ ಸತ್ಕಾರ ವೆಂಬ ಆರು ಕರ್ಮಗಳು..

ಇವುಗಳಲ್ಲಿ ಬಹುಮುಖ್ಯವಾದದು ಸಂಧ್ಯಾವಂದನೆ. ಏಕೆಂದರೆ ಯಾವುದೇ ಕೆಲಸ (ಕರ್ಮ) ಮಾಡಬೇಕಾದರೂ ಸಂಧ್ಯಾವಂದನೆ ಮಾಡಿದ ನಂತರವೇ ಮಾಡಬೇಕು.

ಸಂಧ್ಯಾಹೀನಃ ಅಶುಚಿಃ
ನಿತ್ಯಂ ಅನರ್ಹಃ
ಯತ್ ಅನ್ಯತ್ ಕುರುತೇ
ಕರ್ಮ ನ ತಸ್ಯ ಫಲಭಾಗ್ಯವೇತ್

ಸಂಧ್ಯಾವಂದನೆ ಮಾಡದವನು ಪ್ರತಿನಿತ್ಯ ಸ್ನಾನಮಾಡಿದರೂ ಶುದ್ಧನಲ್ಲ ಯಾವುದೇ ಕರ್ಮ ಮಾಡಿದರೂ ಅದರ ಫಲಕ್ಕೆ ಭಾಗಿಯಲ್ಲ, ಅನುಭವಿಯೂ ಅಲ್ಲ, ಎಂಬುದೇ ಈ ಶ್ಲೋಕದ ಅರ್ಥ

ಲಲಿತಾ ಸಹಸ್ರನಾಮದ ಉತ್ತರ ಭಾಗದಲ್ಲಿ - 'ಸಂಧ್ಯಾಕರ್ಮ ಸಮಾಪ್ಯ ಚ' ...... ಸಂಧ್ಯಾವಂದನೆ ಮಾಡಿದ ನಂತರವೇ ಸಹಸ್ರನಾಮ ಪರಾಯಣ ಮಾಡಬೇಕು ಎಂದು ಹೇಳಲಾಗಿದೆ. ಇದರಿಂದ ಸಂಧ್ಯಾವಂದನೆ ನಮ್ಮ ನಿತ್ಯಕರ್ಮಗಳಲ್ಲಿ ಕಡ್ಡಾಯವಾಗಿ ಮಾಡಲೇಬೇಕಾದ ಒಂದು ಕರ್ಮವೆಂಬುದು ತಿಳಿಯುತ್ತದೆ.

ಎರಡು ಕಾಲದ ಪರಿಮಾಣಗಳ ಸೇರುವ ಅಥವಾ ಭೇಟಿಯ ಕಾಲವೇ ಸಂಧ್ಯಕಾಲ. ಈ ಕಾಲದಲ್ಲೇ ಸಂಧ್ಯಾವಂದನೆ ಮಾಡಬೇಕು

ಸೂರ್ಯ, ನಕ್ಷತ್ರಗಳು, ಇಲ್ಲದ ಹಗಲು - ರಾತ್ರಿಯು ಸೇರುವ ಕಾಲವೇ ಸಂಧ್ಯಾಕಾಲ ಬೆಳಗಿನ ಸಂಧ್ಯಾವಂದನೆ ಎಂಬುದು ನಕ್ಷತ್ರಗಳು ಮರೆಯಾಗುತ್ತಿದ್ದಂತೆ, ಸೂರ್ಯನ ಉದೆ ಯಕ್ಕೆ ಮುಂಚಿನ ಕಾಲ. ಇದೇ ಉಷಃಕಾಲ.

ಇದೇ ರೀತಿ ಸಂಜೆ ಸೂರ್ಯನ ಅಸ್ತಮಕ್ಕೂ ನಕ್ಷತ್ರಗಳ ಮಿನುಗುವಿಕೆಗೂ ಮುಂಚಿನ ಸಮಯವನ್ನೇ ಸಂಧ್ಯಾ ಕಾಲವೆನ್ನುತ್ತೇವೆ.

ಈ ಎರಡೂ ವೇಳೆಯಲ್ಲಿ ಸಂಧ್ಯಾವಂದನೆ ಮಾಡಬೇಕು. ಅದರಲ್ಲೂ ಪ್ರಾತಃಕಾಲದ ಸಂಧ್ಯಾವಂದನೆ ಪ್ರಧಾನವಾದದ್ದು.

ಇದೇ ರೀತಿ ಸೂರ್ಯ ನೆತ್ತಿಗೇರುವ ಸಮಯದಲ್ಲಿ ಅವನ ಕಿರಣಗಳು ನೇರವಾಗಿ ತಲೆಗೆ ಬೀಳುವ ಸಮಯವೇ ಮಧ್ಯಾಹ್ನಿಕ ಕಾಲ ಅಂದರೆ ಹಗಲಿನ ನಡು ಮಧ್ಯದವೇಳೆ ಆಗಲೂ ಸಂಧ್ಯಾವಂದೆ ಮಾಡಬೇಕು ಇದೇ ಮಾಧ್ಯಾಹ್ನಿಕ

'ಆ ಭಗವಂತನೊಬ್ಬನೇ' ಎಂಬ ನಾವು ಉನ್ನತಸ್ಥಾನದಲ್ಲಿಟ್ಟಿದ್ದರೂ, ಆಯಾ ಸ್ಥಿತಿಯನ್ನು ಪಡೆದುವುದಕ್ಕೆ ಮುಂಚೆ, ಹಲವು ನಾಮಗಳು ಪುರುಷದೇವತೆ, ಸ್ತ್ರೀದೇವತೆ ಎಂದು ಪೂಜಿಸುತ್ತೇವೆ. ಇವರ್ಯಾರೂ ನಮ್ಮ ಪ್ರತ್ಯಕ್ಷಗೋಚರಕ್ಕೆ ಸಿಗುವುದಿಲ್ಲ ವಿಗ್ರಹಗಳನ್ನು ಕಾಣುತ್ತೇವಷ್ಟೆ.

ಆದರೆ ಸೂರ್ಯಭಗವಾನ್ ಮಾತ್ರವೇ ಪ್ರತ್ಯಕ್ಷದೈವ ಆದ್ದರಿಂದಲೇ ಅವನಿಗೆ ಬೆಳಗ್ಗೆ, ಮಧ್ಯಾಹ್ನ, ಸಂಜೆ ವಂದಿಸುತ್ತೇವೆ.

ಸಂಧ್ಯಾಕಾಲದಲ್ಲಿನ ಸಂಧ್ಯಾವಂದನೆಯಲ್ಲಿ ಬಹಳ ಮುಖ್ಯವಾದ ಅಂಶವೆಂದರೆ 'ಅರ್ಘ್ಯಪ್ರದಾನ', ನದಿಯಲ್ಲಾಗಲೀ, ಕೊಳದಲ್ಲಾಗಲೀ ನಿಂತು ನಮ್ಮ ಎರಡೂ ಕೈಗಳಿಂದ ಬೊಗಸೆ ನೀರು ತೆಗೆದುಕೊಂಡು ಗಾಯತ್ರೀ ಮಹಾಮಂತ್ರವನ್ನು



ಚ್ಚರಿಸುತ್ತಾ, ಆದಷ್ಟು ಎತ್ತರದಿಂದ ಆ ನೀರನ್ನು ಬಿಡಲು ಸಾಧ್ಯವೋ ಅಷ್ಟು ಎತ್ತರದಿಂದ ಸೂರ್ಯನನ್ನೇ ದಿಟ್ಟಿಸುತ್ತಾ ಬಿಡಬೇಕು. ಇದೇ ಅರ್ಘ್ಯ ಪ್ರಧಾನ

ಬೆಳಿಗ್ಗೆ ಪೂರ್ವದಿಕ್ಕಿನ ಕಡೆ ತಿರುಗಿ ಅರ್ಘ್ಯಬಿಡಬೇಕು ಮನೆಯಲ್ಲಿ ಸಂಧ್ಯಾವಂದನೆ ಮಾಡುವುದಾದರೆ, ತಟ್ಟೆಯೊಂದನಿಟ್ಟುಕೊಂಡು ಅದರಲ್ಲಿ ಬಿಡಬಹುದು. ನೀರೇ ಸಿಗದಿದ್ದ ಸ್ಥಳದಲ್ಲಿ ಮಂತ್ರ ರೂಪದಲ್ಲೇ ಸಮಯಕ್ಕೆ ಸರಿಯಾಗಿ ಇದನ್ನು ಮಾಡಬೇಕು.

ಹೀಗೆ ಪ್ರತಿ ನಿತ್ಯ ತಪ್ಪದೆ ಸೂರ್ಯದೇವನಿಗೆ ಅರ್ಘ್ಯಪ್ರದಾನ ಮಾಡುವುದರಿಂದುಂಟಾಗುವ ಫಲವನ್ನು ವೇದದಲ್ಲೇ ಹೇಳಲ್ಪಟ್ಟಿದೆ.

ಮೂವತ್ತು ಕೋಟಿ ಅಸುರರು ಪ್ರಜಾಪತಿಯಾದ ಬ್ರಹ್ಮದೇವನನ್ನು ಕುರಿತು ಕಠಿಣ ತಪಸ್ಸು ಮಾಡಿ ಅತಿಶಯವಾದ ವರ ಪಡೆದರು ಸಾಮಾನ್ಯವಾಗಿ ಅಸುರರು ತಮ್ಮ ಕ್ಷೇಮ ಮಾತ್ರ ನೋಡಿಕೊಳ್ಳದೆ, ಬಲಶಾಲಿಯೊಂದಿಗೆ ಯುದ್ಧಮಾಡಿ ತಮ್ಮ ಅಹಂಕಾರ ಪ್ರದರ್ಶನಕ್ಕೂ ಕಾಯುತ್ತಾರೆ

ಈ ಅಸುರರು ಒಮ್ಮೆ ತಮ್ಮೊಡನೆ ಯುದ್ಧಕ್ಕೆ ಮಹಾಪರಾಕ್ರಮಶಾಲಿಯಾದ, ಪ್ರತ್ಯಕ್ಷ ದರ್ಶಿಯಾದ ಸೂರ್ಯದೇವನೇ ಸರಿಸಮಾನನು ಅವನೊಂದಿಗೆ ಯುದ್ಧಮಾಡುವ ಇಚ್ಛೆ ಎಂಬ ಅತಿಶಯವಾದ ವರ ಪಡೆದರು

'ಆದಿತ್ಯಃ ನಃ ಯೋದ್ಧಾ ಇತಿ'

ಸೂರ್ಯನನ್ನು ರಾತ್ರಿವೇಳೆಯಲ್ಲಿ ಕಾಣಲಾಗದು, ನಡು ಹಗಲಿನಲ್ಲೂ ಆತನ ಶಕ್ತಿ ಹೆಚ್ಚು ಹತ್ತಿರಕ್ಕೇ ಸುಳಿದರೇನೆ ಭಸ್ಮ

ಸೂರ್ಯನ ಉದಯ, ಅಸ್ತಮಾನ ವೇಳೆಯನ್ನೇ ಯುದ್ಧಕ್ಕೆ ತಕ್ಕ ಸಮಯವೆಂದು ಆರಿಸಿಕೊಂಡರು ಪ್ರಾತಃ, ಸಂಧ್ಯಾಕಾಲದಲ್ಲಿ ಆತನ ದಹ - ದಹಿಸುವಿಕೆ ಸ್ವಲ್ಪ ಕಡಿಮೆ ಆಗ ಆತ ಕೆಂಪು ಹಣ್ಣಿನಂತಿರುತ್ತಾನೆ

ಸೂರ್ಯದೇವ ಪ್ರತಿನಿತ್ಯ ನಮಗೆ ಮಾಡುತ್ತಿರುವ ಸತ್ಕಾರ್ಯ ಒಂದೇ ಎರಡೇ? ಅಲ್ಪ-ಸ್ವಲ್ಪವೇ? ಈತನಿಲ್ಲದಿದ್ದಲ್ಲಿ ಜೀವರಾಶಿಗಳು ಬದುಕಿ ಉಳಿಯಲು ಸಾಧ್ಯವೇ? ಇಂಥ ಸೂರ್ಯದೇವನೊಂದಿಗೆ ಅಸುರರು ಯುದ್ಧಕ್ಕೆ ಮುಂದಾದಾಗ, ಸೂರ್ಯದೇವನಿಗೆ ನಾವೂ ನಮ್ಮ ಕೈಲಾದ ಸಹಾಯಮಾಡಬೇಡವೆ? ಮನುಷ್ಯರಾದ ನಾವು ಆ ಮಹಾತ್ಮನಿಗೆ ಯಾವ ರೀತಿಯಲ್ಲಿ ಸಹಾಯ ಮಾಡಲು ಸಾಧ್ಯ?

ಈ ಸ್ಥಳದಲ್ಲಿ (ಸಮಯದಲ್ಲಿ) ವೇದಗಳು ನಮಗೆ ಸಹಾಯ ಮಾಡಿವೆ. ವೇದ ಮಾತೆ ನಮಗೆ ಬಹಳ ಸುಲಭವಾದ, ಆದರೆ ಫಲಕಾರಿಯಾದ ಒಂದು ಆಯುಧವನ್ನು ಇತ್ತು ಪ್ರಯೋಗಿಸುವಂತೆ ಪ್ರೇರೇಪಿಸಿದ್ದಾಳೆ ಅದೇ ನಾವು ಪ್ರಾತಃ ಕಾಲ, ಸಂಧ್ಯಾಕಾಲ ಮಾಡುವ ಸಂಧ್ಯಾವಂದನದ 'ಅರ್ಘ್ಯಪ್ರದಾನ'

ಅರ್ಘ್ಯಪ್ರದಾನದಲ್ಲಿ ಎರಡೂ ಕೈಗಳಿಂದ ಬೊಗಸೆ ನೀರನ್ನು ತೆಗೆದುಕೊಂಡು ಬಹು ಎತ್ತರದಲ್ಲಿ ಸೂರ್ಯನನ್ನು ನೋಡುತ್ತಾ ಕೆಳಗೆ ಸುರಿಯುವಿಕೆಯೇ- ಅದೇ- ಬಹಳ ಬಲವಾದ ಅಸ್ತ್ರವಾಗಿ ಮಾರ್ಪಾಡಾಗುತ್ತದೆ.

ಗಾಯತ್ರೀ ಮಹಾಮಂತ್ರ ಜಪಮಾಡಿ ಎತ್ತರಕ್ಕೆ ಬಿಡುವ ತೀರ್ಥವೇ ಒಂದು ವಜ್ರಾಯುಧವಾಗಿ ಆ ಅಸುರರನ್ನು ಮಂದೇಹಾರುಣೇ ದ್ವೀಪದಲ್ಲಿ ಎತ್ತಿ ಎಸೆಯುತ್ತದೆ ಎಂದು ವೇದಮಾತೆ ಹೇಳುತ್ತಾಳೆ. ಸೂರ್ಯಭಗವಾನನ ಶತ್ರುಗಳನ್ನೇ ಎತ್ತಿ ಎಸೆಯುವ ಶಕ್ತಿ ಹೊಂದಿರುವ 'ಅರ್ಘ್ಯಪ್ರದಾನ'ವನ್ನು ಎಂಥದ್ದೆಂದು ವರ್ಣಿಸಲು ಸಾಧ್ಯ?

ನಾವು ಮಾತ್ರ ಇದನ್ನು ಮಾಡುತ್ತಿಲ್ಲ. ಬ್ರಹ್ಮ ವಿಷ್ಣು, ಈಶ್ವರ ಮೊದಲಾದ ತ್ರಿಮೂರ್ತಿಗಳೂ, ಉಳಿದ ದೇವತೆಗಳೂ 'ಅರ್ಘ್ಯಪ್ರದಾನ' ಮಾಡುತ್ತಾರೆ. ಸೂರ್ಯ - ಅಸುರರ ಈ ಯುದ್ಧದ ಮಧ್ಯೆ ನಾವು ಪ್ರವೇಶಿಸಿ ಅಸುರರನ್ನು ಹೊಡೆದು ಅವರನ್ನು ದ್ವೀಪಕ್ಕೆ ಎಸೆಯುವುದು ಪಾಪಕರ್ಮವಲ್ಲವೇ?

ಈ ಪಾಪಕರ್ಮವನ್ನು ತಕ್ಷಣವೇ ಹೋಗಲಾಡಿಸಿಕೊಳ್ಳಲು ಸಂಧ್ಯಾವಂದನೆಯಲ್ಲಿ ಮಾರ್ಗ ಹೇಳಿದೆ ಎಂದೂ ವೇದಮಾತೆ ಹೇಳುತ್ತಾಳೆ.

ಗಾಯತ್ರೀ ಮಂತ್ರವನ್ನು ಜಪಿಸಿದ ನಂತರ, ಪ್ರಣಾಯಾಮಮಾಡಿ ಎದ್ದು ಉಪಸ್ಥಾನ ಮಾಡುತ್ತೇವೆ ಆಗ ನಾವು ನಮ್ಮನ್ನು ನಾವೇ ಒಮ್ಮೆ ಸುತ್ತಿಬರುತ್ತೇವೆ ಆಗ ಬೆಳಗ್ಗೆ ಪೂರ್ವದಲ್ಲಿ ಸಂಧ್ಯಾದೇವಿ, ದಕ್ಷಿಣದಲ್ಲಿ ಸಾವಿತ್ರೀ, ಪಶ್ಚಿಮದಲ್ಲಿ ಗಾಯತ್ರೀ, ಉತ್ತರದಲ್ಲಿ ಸರಸ್ವತೀ ದೇವಿಯನ್ನು ಸ್ಮರಿಸಿ ನಮಸ್ಕರಿಸುತ್ತೇವೆ. ಸಂಜೆಯ ವೇಳೆ ಪಶ್ಚಿಮದಲ್ಲಿ ಸಂಧ್ಯಾ, ಉತ್ತರದಲ್ಲಿ ಸಾವಿತ್ರೀ, ಪೂರ್ವದಲ್ಲಿ ಗಾಯತ್ರೀ, ದಕ್ಷಿಣದಲ್ಲಿ ಸರಸ್ವತಿಯನ್ನು ಸ್ಮರಿಸಿ ನಮಸ್ಕರಿಸುತ್ತೇವೆ

ನಾವು ಮಾಡಿದ ಪಾಪಕರ್ಮ ತಕ್ಷಣ ನಾಶವಾಗಿ ಸೌಭಾಗ್ಯವನ್ನು ಪಡೆಯುತ್ತೇವೆ. ಈ ಸಂಧ್ಯಾವಂದನೆಯಲ್ಲಿ ಎಲ್ಲಾ ಮಂತ್ರಗಳೂ ಮುಖ್ಯವಾದವೇ ಅರ್ಥವತ್ತಾದದ್ದು, ಎಲ್ಲಕ್ಕಿಂತಲೂ ಮಿಗಿಲಾದದ್ದು ಗಾಯತ್ರೀ ಮಂತ್ರ. ಈ ಮಂತ್ರಕ್ಕೆ ಅಧಿಪತಿ ವಿಶ್ವಾಮಿತ್ರ ಬ್ರಹ್ಮಮಹರ್ಷಿ.

ಕೌಶಿಕನೆಂಬ ಮಹಾರಾಜ ತಮ್ಮ ಅನವರತ ಪ್ರಯತ್ನದಿಂದ ಘೋರ ತಪಸ್ಸುಮಾಡಿ ಬ್ರಹ್ಮರ್ಷಿಗಳಾದರು ಅದರಂತೆಯೇ ಅವರ ಮಹಾಮಂತ್ರವಾದ ಗಾಯತ್ರೀಮಂತ್ರವನ್ನು ಉಚ್ಚರಿಸಲು ಯೋಗ್ಯತೆ ಪಡೆಯಬೇಕು ಆ ಯೋಗ್ಯತೆ 'ಉಪನಯನ'ವೆಂಬ ಕರ್ಮದಿಂದ ಮಾತ್ರ ಪಡೆಯಲು ಸಾಧ್ಯ. ಅತರಲ್ಲಿ ಯಜ್ಞೋಪವೀತ (ಮುಂಜಿ ಧಾರಣೆ) ಬ್ರಹ್ಮೋಪದೇಶ (ಗಾಯತ್ರೀಮಂತ್ರದ ಉಪದೇಶ) ಬಹುಮುಖ್ಯವಾದದ್ದು ಈ ಉಪದೇಶ ಮಾಡುವವರು, ನಮ್ಮ ಮೊದಲ ಗುರುವಾದ ತಂದೆಯೇ! ಅವರಿಗೂ ಒಳ್ಳೆಯ ಯೋಗ್ಯತೆ ಇರಬೇಕು ನಾವು ಅವರು ಉಪದೇಶಿಸುವ ಸತ್ಕಾರ್ಯಗಳನ್ನು ಮಾಡುತ್ತೇವೆಂಬ ನಂಬಿಕೆ ಉಂಟಾದ ನಂತರವೇ ಅವರು 'ಬ್ರಹ್ಮೋಪದೇಶ' ಮಾಡುವರು. ಹೀಗೆ ಪ್ರತಿನಿತ್ಯ ನಮ್ಮ ನಿತ್ಯಕರ್ಮಗಳಲ್ಲಿ ಮುಖ್ಯವಾದದ್ದು ಸಂಧ್ಯಾವಂದನೆ ಸಂಧ್ಯವಂದನೆಯಲ್ಲದೆ ಉಳಿದ ಕರ್ಮಗಳಿಗೂ ಮೊದಲು ಸಂಕಲ್ಪ ಮಾಡುತ್ತೇವೆ.

ಅಂದರೆ ಫಲವನ್ನುದ್ದೇಶಿಸಿ ಸಂಕಲ್ಪ ಮಾಡುತ್ತೇವೆ. ಆದರೆ ಸಂಧ್ಯಾವಂದನೆಗೆ ಯಾವುದೇ ಪ್ರಾರ್ಥನೆಗಳಿಲ್ಲ. ಸಂಕಲ್ಪವಿಲ್ಲ. ಫಲಾಪೇಕ್ಷೆ ಇಲ್ಲ. ಆದರೆ ನಮ್ಮ ಅರಿವಿಲ್ಲದೆಯೇ ಒಂದು ವಿಶೇಷವಾದ ಫಲ ನಮ್ಮನ್ನರಸಿ ಬರುತ್ತದೆ. ಅದೇ 'ಬ್ರಹ್ಮತೇಜಸ್ಸು' ಇದೇನು ಸಾಧಾರಣವಾದದ್ದೇ? ಯಾವುದಕ್ಕೆ ಸರಿಸಾಟಿ?

'ಬ್ರಹ್ಮತೇಜೋ ಬಲಂ ಬಲಂ'

ಇದನ್ನರಿತ ನಂತರವೇ ಅವರು ಬ್ರಹ್ಮರ್ಷಿಗಳಾದರು. ಅಲ್ಲದೆ ನಮ್ಮ ಹಿಂದೂಧರ್ಮ

10 ನೇ ಪುಟ ನೋಡಿ

# ವಿಶ್ವಾಮಿತ್ರಸ್ಮೃತಿ - ಗಾಯತ್ರಿ

- ವಿದ್ವಾನ್ 'ರಘುಸುತ'.

ಮಹರ್ಷಿ ವಿಶ್ವಾಮಿತ್ರ ಅತ್ಯಂತ ಜನಪ್ರಿಯನಾದ ಮಹಾಮಹಿಮ ರಾಮಾಯಣ, ಪುರಾಣಗಳಲ್ಲಿ ಈತನನ್ನು ಕುರಿತಾದ ಅನೇಕ ಕಥಾನಕಗಳಿವೆ ವಸಿಷ್ಠ - ವಿಶ್ವಾಮಿತ್ರರ ಘರ್ಷಣೆಯ ಪ್ರಸಂಗ, ಹರಿಶ್ಚಂದ್ರನ ಜೀವನದಲ್ಲಿ ಪ್ರವೇಶ ಪಡೆದ ಕೋಪಿಷ್ಠ - ಹಟವಾದಿ ವಿಶ್ವಾಮಿತ್ರ, ರಾಮ-ಲಕ್ಷ್ಮಣರನ್ನು ಕರೆದೊಯ್ದು ಅವರಿಗೆ ಶಸ್ತ್ರಾಸ್ತ್ರಗಳ ಶಿಕ್ಷಣ ನೀಡಿ, ಸೀತಾ - ರಾಮರ ವಿವಾಹ ಮಾಡಿ ಪವಿತ್ರತಮನಾದ ಮಹರ್ಷಿ - ಇತ್ಯಾದಿ ಕಥಾನಕಗಳಿಂದ ಈತನ ಜೀವನ ಚಿತ್ರಣವು ರೋಮಾಂಚಕವಾಗಿದೆ. ಇವೆಲ್ಲದಕ್ಕೂ ಶಿಖರವಿಟ್ಟಂತೆ ವಿಶ್ವಾಮಿತ್ರ - ಮೇನಕೆಯರ ಪ್ರೇಮಪ್ರಸಂಗ ವರ್ಣರಂಜಿತವಾಗಿದೆ. ಇಂತಹ ವೈವಿಧ್ಯಮಯ ಮಹನೀಯನಿಂದಲೇ ಗಾಯತ್ರಿ ಮಂತ್ರ, ದೃಷ್ಟವಾದುದು ವಿಧಿಯ ವೈಚಿತ್ರ್ಯವೇ ಸರಿ

ವಿಶ್ವಾಮಿತ್ರನಂತಹ ಶ್ರದ್ಧಾವಂತ ಪುರುಷಾರ್ಥಿ ಮತ್ತೊಬ್ಬನಿಲ್ಲವೆಂದರೆ ಉತ್ಪ್ರೇಕ್ಷೆಯಾದೀತು ತನ್ನ ಪುರುಷಾರ್ಥದಿಂದ, ಕ್ಷತ್ರಿಯತ್ವದಿಂದ ಬ್ರಹ್ಮತ್ವವನ್ನು ಪಡೆದು, ರಾಜರ್ಷಿಯಿಂದ ಬ್ರಹ್ಮರ್ಷಿಯ ಸ್ಥಾನವನ್ನು ಪಡೆದ ಮಹನೀಯ

ಪ್ರಜಾಪತಿಯ ಮಗ ಕುಶನು. ಈ ವಂಶದಲ್ಲಿ ಮಹಾರಾಜ ಗಾಧಿಯು ಜನಿಸಿದನು. ಈ ಗಾಧಿಯ ಮಗನೇ ವಿಶ್ವಾಮಿತ್ರ. ಕುಶವಂಶದಲ್ಲಿ ಜನಿಸಿದ್ದರಿಂದ ಕೌಶಿಕನೆಂದೂ, ಗಾಧಿಯ ಮಗನಾದುದರಿಂದ ಗಾಧಿಜ ಅಥವಾ ಗಾಧಿನಂದನನೆಂದೂ ಈತನನ್ನು ಕರೆಯುತ್ತಾರೆ.

ಈತನು ಮಹಾ ತಪಸ್ವಿ. ಆದುದರಿಂದಲೇ ಈತನು ಜಗತ್ಪೂಜ್ಯನಾದನು ಈತನ ತ್ಯಾಗ, ಸದಾಚಾರ ಸಂಪನ್ನತೆಗಳು ಈತನ ಜೀವನದ ಗುರಿಯಾಗಿತ್ತು. ಈತನು ಬ್ರಹ್ಮಗಾಯತ್ರಿಯ ದ್ರಷ್ಟಾರನು. ಲೋಕಕ್ಕೆ ಇದರ ಮೂಲಕ ವೇದಮಾತಾ ಗಾಯತ್ರಿ ಭಗವತಿಯ ಪ್ರಥಮ ದರ್ಶನ ಮಾಡಿಸಿದನು ವೇದಗಳು, ಸಂಹಿತೆಗಳು, ಆರಣ್ಯಕಗಳು ಈ ಗಾಯತ್ರಿ ಮಂತ್ರದ ಹಿರಿಮೆಯನ್ನು ಸಾರಿವೆ. ಮೂಲಬ್ರಹ್ಮಗಾಯತ್ರಿ ಮಂತ್ರದಿಂದ ಇತರೇ ಗಾಯತ್ರೀ ಮಂತ್ರಗಳು ಪ್ರಸ್ಫುಟಿತಗೊಂಡವು. ಈತನ ಸಾಹಿತ್ಯ ಸೃಷ್ಟಿಯು ಅಮೂಲ್ಯವೂ, ಅನುಪಮವೂ ಆದುದು ಮೇಲಿನ ಕಥಾಪ್ರಸಂಗಗಳ ದಟ್ಟಣೆಯಲ್ಲಿ ಈತನ ಸಾಹಿತ್ಯ ಸೃಷ್ಟಿಯು ಮುಳುಗಿ ಹೋಗಿ, ಅನೇಕರಿಗೆ ಗೊತ್ತಿಲ್ಲವಾಗಿದೆ. ಈತನು ಗೋತ್ರ ಪ್ರವರ್ತಕನೂ ಹೌದು.

ವಿಶ್ವಾಮಿತ್ರನು ಋಗ್ವೇದದ ತೃತೀಯ ಮಂಡಲದ ಮಂತ್ರದ್ರಷ್ಟಾರನು ಈ ಮಂಡಲವನ್ನು 'ವೈಶ್ವಾಮಿತ್ರ ಮಂಡಲ' ಎಂದು ಕರೆಯಲಾಗುತ್ತದೆ. ಇದರಲ್ಲೆ ಗಾಯಿತ್ರಿ ಮಂತ್ರವನ್ನು ವಿವರಿಸಲಾಗಿದೆ.

ಈತನು ಅನೇಕ ಧರ್ಮಗ್ರಂಥಗಳನ್ನು ರಚಿಸಿದ್ದಾನೆ ಅವುಗಳಲ್ಲಿ ಮುಖ್ಯವಾದುವು - 'ವಿಶ್ವಾಮಿತ್ರ ಕಲ್ಪ', 'ವಿಶ್ವಾಮಿತ್ರ ಸಂಹಿತಾ' ಹಾಗೂ 'ವಿಶ್ವಾಮಿತ್ರ ಸ್ಮೃತಿ' ಈ ಎಲ್ಲ ಗ್ರಂಥಗಳೂ ಗಾಯತ್ರಿಯ ಉಪಾಸನೆ ಹಾಗೂ ಸಂಧ್ಯೋಪಾಸನೆಯ ವಿಧಾನಗಳನ್ನು ವಿವರಿಸಿವೆ ಗಾಯತ್ರಿ ಮಂತ್ರದಲ್ಲಿ ಅಪಾರ ಶಕ್ತಿ ಇದೆ. ವಿಶ್ವಾಮಿತ್ರನು ಈ ಮಂತ್ರದ ಮೂಲ ಆಚಾರ್ಯನಾದುದರಿಂದ, ಗಾಯತ್ರಿ ಉಪಾಸನೆಯಲ್ಲಿ ಈತನ (ಆಚಾರ್ಯನ) ಕೃಪೆಯನ್ನು ಪಡೆಯುವುದು ಅವಶ್ಯಕವಾಗಿದೆ

ಈತನು ತನ್ನ ಜೀವನ ಚರ್ಯೆಯಲ್ಲಿ ಧರ್ಮಪರಾಯಣತೆಯಿಂದ ನಡೆದುಕೊಂಡ. ಗಾಯತ್ರಿ ಸಾಧನೆಯಿಂದ ಕಾಮ, ಕ್ರೋಧ, ಲೋಭ, ಮೋಹ ಇತ್ಯಾದಿ ಶತ್ರುಗಳನ್ನು ಜಯಿಸಿದ್ದ. ತಪಸ್ಸು ಮಾಡುವುದರಲ್ಲಿ ಈತನು ಇತರರಿಗೆ ಆದರ್ಶನಾಗಿದ್ದ. ಸಪ್ತರ್ಷಿಗಳಲ್ಲಿ ಇದ್ದು, ಇಂದಿಗೂ ಜಗತ್ತಿನ ಜೀವಿಗಳ ಕಲ್ಯಾಣಚಿಂತನೆಯಲ್ಲಿ ಮಗ್ನನಾಗಿದ್ದಾನೆ 'ಭೋಗ ಲಾಲಸೆಯು ಎಂದಿಗೂ ಕಡಿಮೆಯಾಗುವುದಿಲ್ಲ. ಅದು ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಗುತ್ತದೆ.' ಈ ನಿಟ್ಟಿನಲ್ಲಿ ಈತನು ನೀಡಿರುವ ಒಂದು ಉಪದೇಶವು ತುಂಬಾ ಮಾರ್ಮಿಕವಾದುದು. ಅದು ಈ ರೀತಿ ಇದೆ -

ಕಾಮಂ ಕಾಮಯಮಾನಸ್ಯ
ಯದಿ ಕಾಮಃ ಸಮೃಧ್ಯತಿ
ಅಥೈನಮಪರಃ ಕಾಮೋ
ಭೂಯೋ ವಿಧ್ಯತಿ ಬಾಣವತ್
ನ ಜಾತು ಕಾಮಃ ಕಾಮಾನಾ
ಮುಪಭೋಗೇನ ಶಾಮ್ಯತಿ
ಹವಿಷಾ ಕೃಷ್ಣವರ್ತ್ಮೇವ
ಭೂಯ ಏವಾಭಿವರ್ಧತೇ
ಕಾಮಾನಭಿಲಷನ್ ಮೋಹಾನ್ನ
ನರಃ ಸುಖ ಮೇಧತೇ

(ಪದ್ಮ ಸೃ 19/ 261 - 263)

'ಮಾನವನ ಒಂದು ಭೋಗಲಾಲಸೆಯು, ಕಾಮನೆಯು ಪೂರ್ತಿಯಾದಲ್ಲಿ, ಅವನಲ್ಲಿ ಎರಡನೇ ಹೊಸ ಕಾಮನೆಯು ಹುಟ್ಟಿ ಅವನನ್ನು ಬಂಧಿಸುತ್ತದೆ. ಭೋಗಗಳ ಇಚ್ಛೆಯು ಉಪಭೋಗದ ಮುಖಾಂತರ ಎಂದಿಗೂ ಶಮನಗೊಳ್ಳುವುದಿಲ್ಲ. ಬದಲಾಗಿ ತುಪ್ಪ ಸುರಿದ ಅಗ್ನಿಯಂತೆ ಅದು ಹೆಚ್ಚು ಪ್ರಜ್ವಲಿತಗೊಳ್ಳುತ್ತದೆ. ಭೋಗಗಳ ಅಭಿಲಾಷೆ ಇರುವ ವ್ಯಕ್ತಿಯು ಮೋಹವಶನಾಗಿ ಸುಖವನ್ನು ಎಂದಿಗೂ ಕಾಣಲಾರದವನಾಗುತ್ತಾನೆ. ಆದುದರಿಂದ ಅವನು ತನ್ನಲ್ಲಿನ ಭೋಗ ಲಾಲಸೆಯನ್ನು ಸಂಪೂರ್ಣವಾಗಿ ತ್ಯಜಿಸಿ, ಆತ್ಮ ಚಿಂತನದಲ್ಲಿ ತಲ್ಲೀನನಾಗುವುದು ಒಳ್ಳೆಯದು'

ಈ ರೀತಿಯ ಅನೇಕ ಜೀವನೋಪಯೋಗಿ ಹಾಗೂ ಪಾರಮಾರ್ಥಿಕ ಉಪದೇಶಗಳು ವಿಶ್ವಾಮಿತ್ರನ ವಾಣಿಯಿಂದ ಪ್ರಸ್ಫುಟಿತಗೊಂಡು, ಈತನ ಗ್ರಂಥಗಳಲ್ಲಿ ಹಾಗೂ ಪುರಾಣೇತಿಹಾಸಗಳಲ್ಲಿ ತುಂಬಿ ಹೋಗಿವೆ

## ವಿಶ್ವಾಮಿತ್ರ ಸ್ಮೃತಿ

ಈ ಗ್ರಂಥದಲ್ಲಿನ ಮುಖ್ಯ ಪ್ರತಿಪಾದಿತ ವಿಷಯವೆಂದರೆ 'ಸಂಧ್ಯೋಪಾಸನೆ ಹಾಗೂ ಗಾಯತ್ರೀ ಆರಾಧನೆ'. ಕಣ್ವ, ಭಾರದ್ವಾಜ, ಮನು, ಯಾಜ್ಞವಲ್ಕ್ಯ ಹಾಗೂ ವ್ಯಾಸರ ಸ್ಮೃತಿಗಳಲ್ಲಿ ಸಂಧ್ಯೋಪಾಸನೆಯ ಮಹಿಮೆಯು ವಿಶೇಷ ರೀತಿಯಲ್ಲಿ ನಿರೂಪಿಸಲ್ಪಟ್ಟಿದೆ. ಇವರೆಲ್ಲರೂ 'ವಿಶ್ವಾಮಿತ್ರಸ್ಮೃತಿ'ಯನ್ನು ವಿಶೇಷವಾಗಿ ಪ್ರಶಂಸಿಸಿದ್ದಾರೆ

ಈ ಸ್ಮೃತಿಯಲ್ಲಿ ೪೭೫ ಶ್ಲೋಕಗಳಿದ್ದು, ಏಳು ಅಧ್ಯಾಯಗಳಿವೆ. ಪೂರ್ತಿ ಗ್ರಂಥವು ಶ್ಲೋಕಗಳಿಂದ ಕೂಡಿದ್ದರೂ, ಮಂತ್ರಗಳ ವಿನಿಯೋಗ

## ಆವ ದೇವರಿಗುಂಟು

ಆವ ದೇವರಿಗುಂಟೀ ವೈಭವ ||ಪ||

ಸಾರ್ವಭೌಮ ನೀನೆ ಸಕಲ
ದೇವರೊಳಗೆ ಭಾವಜನಯ್ಯ ||ಅ ಪ||

ಸಿರಿಯರೆಂಟು ಮಂದಿ ನಿನಗೆ
ಅರಸಿಯರು ಕರುಣ ಶರದಿ
ಸುರರು ಮೂವತ್ತು ಮೂರು ಕೋಟಿ
ಚರಣ ಸೇವಕರಯ್ಯ ಹರಿಯೆ ||೧||

ಅನುದಿನವು ಎಡೆಬಿಡದೆ ಮನು
ಮುನಿಗಳ ಸುಜನ ಸಂತತಿ
ಘನ ವೇದ ಘೋಷದಿಂದ
ನೆನೆದು ಪೂಜಿಪರ ಪರಿಮಿತ ಲೀಲೆ ||೨||

ಕೋಟಿ ಸೂರ್ಯ ಪ್ರಕಾಶ ನಿನ್ನ
ಆಟ ಬಲ್ಲವರಾರು ಜಗದಿ
ಆಟವಾಡುವಿ ಅಗಮ್ಯಚರಿತ
ಸಾಟಿಯಿಲ್ಲವೆ ಧನವ ಕಲಿಸಿ ||೩||

ಕರೆಸಿ ಅಸಮ ಭಕುತ ಜನರ
ವರವ ನೀಡಿ ಮುಡಿಪು ಗೊಂಡು
ಮೆರೆವಿ ಪರಮ ಉತ್ಸವದೊಡನೆ
ಗಿರಿಯ ಭೂವೈಕುಂಠ ವೆನಿಸಿ ||೪||

ಕಿಂಕರ ಜನರ ಪೊರೆಯ ಲೋಸುಗ
ವೆಂಕಟಾದ್ರಿಯಲ್ಲಿ ನಿಂದಿ
ವೆಂಕಟೇಶ ಕಿಂಕರ ಜನರ
ಸಂಕಟ ಹರ ಶ್ರೀರಾಮಪ್ರಭೋ ||೫||

- ಶ್ರೀರಾಮದಾಸರು.

ಹಾಗೂ ಋಷಿ, ಛಂದ, ದೇವತೆಗಳ ವರ್ಣನೆ ಬಂದಾಗ ಗದ್ಯವನ್ನು ಪ್ರಯೋಗಿಸಲಾಗಿದೆ.

ಮುಖ್ಯವಾಗಿ ಇದರಲ್ಲಿ ಬ್ರಾಹ್ಮಮುಹೂರ್ತ, ಉಷಃಕಾಲ, ಅರುಣೋದಯ ಹಾಗೂ ಪ್ರಾತಃ ಕಾಲದ ಸಮಯದ ವರ್ಣನೆ, ನಿತ್ಯ ನೈಮಿತ್ತಿಕ ಕರ್ಮಗಳನ್ನು ಕಾಲಕಾಲದಲ್ಲಿ ಮಾಡುವುದರಿಂದ ಅವು ಫಲಪ್ರದವಾಗುತ್ತವೆ ಎಂದು ತಿಳಿಸಲಾಗಿದೆ ಇದರೊಂದಿಗೆ ನಿಯತಕಾಲದ ಮಹಿಮೆ, ಸಂಧ್ಯಾ ಹಾಗೂ ಜಪಗಳು ಆವಶ್ಯಕ ನಿತ್ಯಕರ್ಮಗಳು ಎಂಬುದು ಪ್ರತಿಪಾದಿತವಾಗಿದೆ ಅಲ್ಲದೆ, ಜಾಗರಣ, ಭೂಮಿವಂದನೆ, ಮಂಗಳದರ್ಶನ, ಪ್ರಾತಃ ಸ್ಮರಣೀಯ ಮಂಗಳ ಪಠನ - ಇತ್ಯಾದಿ ಪ್ರಾತಃ ಕಾಲೀನ ಕೃತ್ಯಗಳು, ಪ್ರಾತಃಸ್ನಾನದ ಮಹಿಮೆ, ಆಚಮನ, ವಿಧಿ, ಶ್ರೌತ, ಸ್ಮಾರ್ತ, ಆಗಮ, ಪೌರಾಣ ಹಾಗೂ ಮಾನಸ - ಈ ಐದು ವಿಧ ಆಚಮನಗಳ ವಿಧಿವಿಧಾನಗಳು, ಸ್ನಾನದ ವಿಧಾನ, ಮಾರ್ಜನ ಮಂತ್ರ, ಪ್ರಾಣಾಯಾಮ ವಿಧಿ, ಅವನ್ನು ಆಚರಿಸುವುದರಿಂದ ಉಂಟಾಗುವ ಲಾಭ, ವಿಲೋಮ ಗಾಯತ್ರಿ ಮಂತ್ರ ಜಪ ವಿಧಾನ ಹಾಗೂ ಅದರ ಅನಂತ ಫಲ, ಮಾನಸ ಪೂಜೆ, ಸಂಧ್ಯಾವಂದನದಲ್ಲಿ ತ್ರೈಕಾಲಿಕ ಸೂರ್ಯಾರ್ಘ್ಯದಾನದ ವಿಧಾನ, ಪ್ರಾಯಶ್ಚಿತ್ತಾರ್ಘ್ಯದಾನ, ನೈಮಿತ್ತಿಕ ಹಾಗೂ ಕಾಮ್ಯ ಹೆಸರಿನ ಜಪದ ಎರಡು ಭೇದಗಳು, ಜಪ ಮಾಡುವುದಕ್ಕೆ ಪ್ರಶಸ್ತವಾದ ಪ್ರದೇಶ, ಭೂತಶುದ್ಧಿ, ದಿಗ್ಬಂಧನ, ಕರಾಂಗನ್ಯಾಸ, ಹೃದಯಾದಿನ್ಯಾಸ, ಗಾಯತ್ರಿಯ ೨೪ ಮುದ್ರೆಗಳು ಹಾಗೂ ಆವಾಹನಾದಿ ೧೦ ಮುದ್ರೆಗಳು, ಸಂಧ್ಯೆಯಲ್ಲಿ ಸೂರ್ಯೋಪಸ್ಥಾನದ ಮಹಿಮೆ ಹಾಗೂ ಅದರ ವಿಧಿ, ಅದರ ಮಂತ್ರ, ದೇವಯಜ್ಞ, ವೈಶ್ವದೇವ ಹಾಗೂ ಪಂಚಬಲಿ ಹಾಗೂ ನಿತ್ಯ ಹೋಮದ ವಿಧಾನಗಳನ್ನು ತಿಳಿಸಲಾಗಿದೆ.

ಗಾಯತ್ರಿ ಉಪಾಸಕರು ಹಾಗೂ ಸಂಧ್ಯಾ ವಿಷಯದ ಜಿಜ್ಞಾಸುಗಳಿಗೆ ಈ ಸ್ಮೃತಿಯು ತುಂಬಾ ಉಪಯೋಗಕರವಾದುದು ವಿಶ್ವಾಮಿತ್ರನ ದೀರ್ಘಕಾಲದ ತಪಸ್ಸಿನ ರಹಸ್ಯವು ನಿರಂತರ ಗಾಯತ್ರೀ ಸಾಧನೆಯ ಆಗಿದೆ ಗಾಯತ್ರಿ ಮಾತೆ ಸಿದ್ಧಿಯು ಈತನಿಗಾಗಿತ್ತು ಈತನ ನವೀನ ಸೃಷ್ಟಿ ಹಾಗೂ ಸಶರೀರವಾಗಿ ತ್ರಿಶಂಕುವನ್ನು ಸ್ವರ್ಗಲೋಕಕ್ಕೆ ಕಳುಹಿಸುವ ಪ್ರಯತ್ನ - ಇಂತಹ ಅಸಂಭವ ಕಾರ್ಯಗಳನ್ನು ಸಾಧ್ಯಗೊಳಿಸಿದ್ದು, ಸಂಧ್ಯೋಪಾಸನೆಯ ಬಲದಿಂದಲೇ !

'ವಿಶ್ವಾಮಿತ್ರ ಸ್ಮೃತಿ'ಯಲ್ಲಿ ಪ್ರತಿ ದಿನವೂ ಯಾವ ರೀತಿಯಲ್ಲಿ ಭಾವ - ಭಕ್ತಿ ಪೂರ್ವಕವಾಗಿ ಸಂಧ್ಯೋಪಾಸನೆಯನ್ನು ಹೇಗೆ ಮಾಡಬೇಕು, ಅದರ ಪೂರ್ಣ ವಿಧಿಯ ಜ್ಞಾನವನ್ನು ಹೇಗೆ ಪಡೆಯಬೇಕು - ಎಂಬುದನ್ನು ವಿವರಿಸಲಾಗಿದೆ

## ಎಲ್ಲ ಕರ್ಮಗಳೂ ನಿಯಮದಂತೆ ನಡೆಯಬೇಕು

ಸ್ನಾನ ಸಂಧ್ಯಾದಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಯಾವ ಯಾವ ಸಮಯದಲ್ಲಿ ಮಾಡಬೇಕೆಂದಿದೆಯೊ, ಅದೇ ಸಮಯದಲ್ಲಿ ಮಾಡಬೇಕು. ಹಾಗೆ ಮಾಡಿದಲ್ಲಿ ಅವು ಸಫಲವಾಗುತ್ತವೆ, ಇಲ್ಲದಿದ್ದಲ್ಲಿ ನಿಷ್ಫಲವಾಗುತ್ತವೆ

ನಿತ್ಯ ನೈಮಿತ್ತಿಕೇ ಕಾಮ್ಯೇ
ಕೃತೇ ಕಾಲೇ ತು ಸತ್ಫಲಮ್ ||4||
ಕಾಲಾತೀತಂ ನ ಕರ್ತವ್ಯಂ
ಕರ್ತವ್ಯಂ ಕಾಲ ಸಂಯುತಮ್
ತಸ್ಮಾತ್ ಸರ್ವಪ್ರಯತ್ನೇನ
ಕಾಲೇ ಕರ್ಮ ಸಮಾಚರೇತ್ ||7||

ಮಳೆಯಾದ ಕೂಡಲೇ ಬೀಜ ಬಿತ್ತಿದಾಗ ಒಳ್ಳೆ ಫಸಲು ಬರುವಂತೆ ನಿಯುಕ್ತ ಕರ್ಮಗಳನ್ನು ಸೂಕ್ತ ಸಮಯದಲ್ಲಿ ಮಾಡುವುದರಿಂದ ಸುಖ ಹಾಗೂ ಸಿದ್ಧಿಗಳು ಲಭಿಸುತ್ತವೆ-

ನಿಯುಕ್ತ ಕರ್ಮಾಣಿ ನಿಯುಕ್ತ ಕಾಲೇ
ಕೃತಾನಿ ಸದ್ಯಃ ಸುಖಸಿದ್ಧದಾನಿ
ಯಥೋಪ್ತಬೀಜಾನಿ ಯಥಾ ಫಲಾನಿ
ಕಾಲೇ ಹಿ ವೃಷ್ಟಿರ್ಭುವಿ ಜೀವನಾನಿ ||2||

ಯಾವುದಾದರೊಂದು ಕಾರಣದಿಂದ ಸಮಯದ ಲೋಪವಾದಲ್ಲಿ ಪ್ರಾಯಶ್ಚಿತ್ತರೂಪದಲ್ಲಿ 3000 ಗಾಯತ್ರಿ ಜಪಗಳನ್ನು ಮಾಡಬೇಕು-

ತ್ರಿಸಹಸ್ರ ಜಪಂ ಕುರ್ಯಾತ್
ಪ್ರಾಯಶ್ಚಿತ್ತಂ ವಿಧೀಯತೇ ||9||

## ತ್ರಿಕಾಲ ಸಂಧ್ಯೆಯ ಸಮಯ

ಪ್ರಾತಃಕಾಲ, ಮಧ್ಯಾಹ್ನ ಹಾಗೂ ಸಾಯಂಕಾಲ - ಈ ಮೂರೂ ಕಾಲಗಳಲ್ಲಿ ಸಂಧ್ಯಾವಂದನೆ ಮಾಡಬೇಕು. ಹೀಗೆ ಮಾಡುವ ಸಂಧ್ಯಾವಂದನೆಯು ಉತ್ತಮ, ಮಧ್ಯಮ ಹಾಗೂ ಅಧಮ - ಎನ್ನುವ ಮೂರು ರೀತಿಗಳದ್ದಾಗಿರುತ್ತವೆ.

ಸೂರ್ಯೋದಯಕ್ಕೆ ಮೊದಲು ಆಕಾಶದಲ್ಲಿ ನಕ್ಷತ್ರಗಳು ಕಾಣಿಸುತ್ತಿರುವಾಗ ಮಾಡುವ ಸಂಧ್ಯಾವಂದನೆಯು ಉತ್ತಮವಾದುದು ಆ ತಾರೆಗಳು ಕಣ್ಮರೆಯಾದ ಸೂರ್ಯೋದಯದ ಸಮಯದ ಸಂಧ್ಯಾವಂದನೆಯು ಮಧ್ಯಮ ತರಹದ್ದಾಗಿದ್ದು, ಸೂರ್ಯೋದಯದ ನಂತರದ ಸಂಧ್ಯಾವಂದನೆಯು ಅಧಮವಾದುದಾಗಿರುತ್ತದೆ-

ಉತ್ತಮಾ ತಾರಕೋಪೇತಾ
ಮಧ್ಯಮಾ ಲುಪ್ತತಾರಕಾ
ಅಧಮಾ ಸೂರ್ಯಸಹಿತಾ
ಪ್ರಾತಃ ಸಂಧ್ಯಾ ತ್ರಿಧಾ ಮತಾ ||22||

ಮಧ್ಯಾಹ್ನಕ್ಕೆ ಮೊದಲಿನಲ್ಲಿ ಮಾಡುವ ಮಧ್ಯಾಹ್ನ - ಸಂಧ್ಯೆಯು ಉತ್ತಮವಾದುದು ಮಧ್ಯಾಹ್ನ ಸಮಯಕ್ಕೆ ಸರಿಯಾಗಿ ಮಾಡುವ ಸಂಧ್ಯೆಯು ಮಧ್ಯಮವಾದುದೂ, ನಂತರದಲ್ಲಿ ಮಾಡುವುದು ಅಧಮ ಸಂಧ್ಯೆಯೂ ಆಗಿರುತ್ತದೆ

ಉತ್ತಮಾ ಪೂರ್ವ ಸೂರ್ಯಾ ಚ
ಮಧ್ಯಮಾ ಮಧ್ಯ ಸೂರ್ಯಕಾ
ಅಧಮಾ ಪಶ್ಚಿಮಾದಿತ್ಯಾ
ಮಧ್ಯ ಸಂಧ್ಯಾಂ ತ್ರಿಧಾ ಮತಾ ||23||

ಇದೇ ರೀತಿಯಲ್ಲಿ ಸಾಯಂಕಾಲದಲ್ಲಿ ಸೂರ್ಯನು ಮುಳುಗುವುದಕ್ಕೆ ಮುಂಚೆ ಸೂರ್ಯನ ಬೆಳಕು ಇರುವಾಗಲೇ ಮಾಡುವ ಸಂಧ್ಯಾವಂದನೆಯು ಉತ್ತಮವಾದುದು ಸೂರ್ಯಾಸ್ತದ ನಂತರದಲ್ಲಿ ಮಾಡುವುದು ಮಧ್ಯಮ, ನಕ್ಷತ್ರಗಳ ಕಾಣಿಸಿದ ನಂತರ ಮಾಡುವುದು ಅಧಮ ಸಂಧ್ಯಾವಂದನೆಯಾಗುತ್ತದೆ

ಉತ್ತಮಾ ಸೂರ್ಯ ಸಹಿತಾ
ಮಧ್ಯಮಾ ಲುಪ್ತಭಾಸ್ಕರಾ
ಅಧಮಾ ತಾರಕೋಪೇತಾ
ಸಾಯಂ ಸಂಧ್ಯಾ ತ್ರಿಧಾ ಮತಾ ||24||

## ಸಂಧ್ಯಾವಂದನೆಗೆ ಯಾವ ಕಡೆ ಮುಖ ಮಾಡುವುದು?

ತ್ರಿಕಾಲದ ಸಂಧ್ಯಾವಂದನೆ ಮಾಡುವಾಗ ಪೂರ್ವ ಅಥವಾ ಉತ್ತರದ ಕಡೆ ಮುಖ ಮಾಡಿ ಸಂಧ್ಯೆಯನ್ನು ಆಚರಿಸಬೇಕು; ದಕ್ಷಿಣ, ಪಶ್ಚಿಮದ ಕಡೆ ಮುಖ ಮಾಡಲೇಬಾರದು-

ಸಂಧ್ಯಾತ್ರಯೇ ಪೂರ್ವಮುಖೋ ದ್ವಿಜನ್ಮಾ
ತ್ರಿರ್ದ್ವೈವ ಶುದ್ಧಾಚಮನಂ ಪ್ರಕುರ್ಯಾತ್
ಉದಜ್ಮುಖೋ ವಾಪಿ ಸಮಾಚರೇನ್ನ
ತದ್ ದಕ್ಷಿಣಾಪಶ್ಚಿಮಯೋಃ ಕದಾಪಿ ||26

ಸೂರ್ಯೋದಯಕ್ಕೆ ನಾಲ್ಕು ಘಳಿಗೆಗಳಿಗೆ ಮೊದಲು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು, ಹಸ್ತಗಳನ್ನು ನೋಡಿಕೊಂಡು, ನೆಲದ ಮೇಲೆ ಕಾಲೂರುವುದಕ್ಕೆ ಮುಂಚೆ ಭೂಮಾತೆಗೆ ಅಭಿವಾದನ ಮಾಡಬೇಕು. ಭೂಮಿ ಮೇಲೆ ಕಾಲೂರುವ ವಿವಶತೆಗಾಗಿ ಆಕೆಯಲ್ಲಿ ಕ್ಷಮೆ ಯಾಚಿಸಲು ಈ ರೀತಿ ಪ್ರಾರ್ಥನೆ ಮಾಡಬೇಕು-

ಸಮುದ್ರವಸನೇ ದೇವಿ
ಪರ್ವತಸ್ತನ ಮಂಡಲೇ ||44||
ವಿಷ್ಣುಪತ್ನೀ ನಮಸ್ತುಭ್ಯಂ
ಪಾದಸ್ಪರ್ಶಂ ಕ್ಷಮಸ್ವಮೇ ||45||

'ಸಮುದ್ರ ರೂಪದ ವಸ್ತ್ರಗಳನ್ನು ಧರಿಸಿರುವ, ಪರ್ವತ ರೂಪದ ಸ್ತನಮಂಡಲವನ್ನು ಹೊಂದಿರುವ ಭಗವಾನ್ ವಿಷ್ಣುವಿನ ಪತ್ನೀರೂಪಳಾದ ಹೇ ಭೂಮಾತೆ' ನಾನು ನಿನ್ನನ್ನು ಪಾದದಿಂದ ಸ್ಪರ್ಶಿಸುತ್ತಿರುವುದಕ್ಕೆ ಕ್ಷಮಿಸು'

ಇದೇ ರೀತಿಯಲ್ಲಿ ಭಗವಾನ್ ಶಂಕರನನ್ನು ದೈನಂದಿನ ಕೆಲಸ ಕಾರ್ಯಗಳ ಪ್ರಾರಂಭಕ್ಕಾಗಿ ಪ್ರಾರ್ಥಿಸಿ, ಆತನ ಅನುಮತಿ ಪಡೆಯಬೇಕು-

ಅತಿ ತೀಕ್ಷ್ಣ ಮಹಾಕಾಯ
ಕಲ್ಪಾಂತದಹನೋಪಮಃ ||45||
ಭೈರವಾಯ ನಮಸ್ತುಭ್ಯ
ಮನುಜ್ಞಾಂ ದಾತು ಮರ್ಹಸಿ ||46||

'ಸುತೀಕ್ಷ್ಣನೂ, ಮಹಾನ್ ಶರೀರವನ್ನು ಹೊಂದಿರುವವನೂ, ಕಲ್ಪಾಂತ ಪ್ರಳಯಾಗ್ನಿ ಸಮಾನನೂ, ತೇಜೋಮಯನೂ ಆದ ಭೈರವ ದೇವನೆ' ನಿನಗೆ ನಮಸ್ಕಾರ' ಆಜ್ಞೆ ನೀಡಲು ನೀನೇ ಸಮರ್ಥನು' ಆದುದರಿಂದ ನಿತ್ಯ ನೈಮಿತ್ತಿಕ ಕಾರ್ಯಗಳನ್ನು ಮಾಡಿಕೊಳ್ಳಲು ನನಗೆ ಅನುಮತಿ ನೀಡು''

ನಂತರದಲ್ಲಿ ಶೌಚ, ದಂತಧಾವನ, ಸ್ನಾನಾದಿ ಕರ್ಮಗಳನ್ನು ಮಾಡಬೇಕು ಇದರ ವಿಧಿಗಳನ್ನೂ ಈ ಸ್ಮೃತಿಯಲ್ಲಿ ತಿಳಿಸಲಾಗಿದೆ

## ಸ್ನಾನದಿಂದ ಉಪಯೋಗ

ವಿಧಿಪೂರ್ವಕವಾಗಿ ಪ್ರತಿದಿನ ಪ್ರಾತಃಕಾಲ ಸ್ನಾನ ಮಾಡುವುದರಿಂದ ರೂಪ, ತೇಜಸ್ಸು, ಬಲ, ಪವಿತ್ರತೆ, ಆಯುಸ್ಸು, ಆರೋಗ್ಯ ನಿರ್ಮಲತೆ, ತಪ, ಹಾಗೂ ಬುದ್ಧಿವಂತಿಕೆಗಳು ಪ್ರಾಪ್ತವಾಗುತ್ತವೆ ಇದು ದುಃಸ್ವಪ್ನಗಳನ್ನೂ ನಾಶಮಾಡುತ್ತವೆ

ಗುಣಾ ದಶ ಸ್ನಾನಕೃತೋ ಹಿ ಪುಂಸೋ
ರೂಪಂ ಚ ತೇಜಶ್ಚ ಬಲಂ ಚ ಶೌಚಮ್
ಆಯುಷ್ಯ ಮಾರೋಗ್ಯಮಲೋಲುಪತ್ವಂ
ದುಃಸ್ವಪ್ನನಾಶಂ ಚ ತಪಶ್ಚ ಮೇಧಾ ||86||

ಸ್ನಾನಾದಿಗಳ ನಂತರ ಪ್ರಾಣಾಯಾಮ, ಅಘಮರ್ಷಣ ಹಾಗೂ ಸೂರ್ಯೋಪಸ್ಥಾನಂ - ಇತ್ಯಾದಿಗಳನ್ನು ಆಚರಿಸಿ, ಗಾಯತ್ರಿ ಮಾತೆಯ ಧ್ಯಾನ ಮಾಡಬೇಕು ನಂತರದಲ್ಲಿ ಗಾಯತ್ರಿ ಮಂತ್ರವನ್ನು ಶ್ರದ್ಧಾಪೂರ್ವಕವಾಗಿ ಜಪ ಮಾಡಬೇಕು. ಈ ಸ್ಮೃತಿಯಲ್ಲಿ ಗಾಯತ್ರಿ ಮಾತೆಯ ಅನೇಕ ಧ್ಯಾನ ಸ್ವರೂಪಗಳನ್ನು ತಿಳಿಸಲಾಗಿದೆ ಇದರಿಂದ ಆಕೆಯ ಮುಖ್ಯವಾದ ಧ್ಯಾನ ಸ್ವರೂಪವು ತಿಳಿದು ಬರುತ್ತದೆ-

## ಪಂಚಮುಖಿಯ ಗಾಯತ್ರಿ ಮಾತೆಯ ಧ್ಯಾನ

ಮುಕ್ತ ವಿದ್ರುಮ ಹೇಮನೀಲ
ಧವಲ ಚ್ಛಾಯೈರ್ಮುಖೈಸ್ತ್ರೀಕ್ಷಣೈ-
ರ್ಯುಕ್ತಾಮಿಂದು ನಿಬದ್ಧರತ್ನಮುಕುಟಾಂ
ತತ್ತ್ವಾತ್ಮವರ್ಣಾತ್ಮಿಕಾಮ್
ಸಾವಿತ್ರೀಂ ವರದಾಭಯಾಂಕುಶ
ಕಶಾಃ ಶುಭ್ರಂ ಕಪಾಲಂ ಗುಣಂ
ಶಂಖಂ ಚಕ್ರಮಥಾರವಿಂದಯುಗಲಂ
ಹಸ್ತೈರ್ವಹಂತೀಂ ಭಜೇ ||65||

'ಮುತ್ತು, ಹವಳ, ಚಿನ್ನ ನೀಲಮಣಿ ಹಾಗೂ ಉಜ್ವಲವಾಗಿರುವ ಪಂಚಮುಖಗಳಿಂದ ಕೂಡಿದ ಮಾತೆಯು ತ್ರಿನೇತ್ರಗಳಿಂದ ಸುಶೋಭಿತಳಾಗಿದ್ದಾಳೆ ರತ್ನಮಯ ಕಿರೀಟವನ್ನು ಧರಿಸಿದ್ದಾಳೆ ೨೪ ವರ್ಣಗಳಿಂದ ಆಕೆ ಕೂಡಿದವಳಾಗಿದ್ದಾಳೆ ಇಂತಹ ವರದಾಯಿನಿ ಗಾಯತ್ರೀ ದೇವಿಯು ತನ್ನ ಹತ್ತು ಕೈಗಳಿಂದ ಅಭಯ, ವರಮುದ್ರಗಳಿಂದ ಅಂಕುಶ, ಪಾಶ, ಶುಭ್ರ ಕಪಾಲ, ಹಗ್ಗ, ಶಂಖ, ಚಕ್ರ ಮತ್ತು ಎರಡು

ಕಮಲಗಳನ್ನು ಧರಿಸಿರುವಳು. ಇಂತಹ ಮಾತೆಯನ್ನು ನಾವು ಧ್ಯಾನಿಸುವೆವು'

ಇದು ಭಗವತೀ ಗಾಯತ್ರಿಯ ಮುಖ್ಯ ಧ್ಯಾನವಾಗಿದೆ ಶಾರದಾ ತಿಲಕ (21/15) ಇತ್ಯಾದಿ ಆಗಮಗಳಲ್ಲಿ ಹಾಗೂ ದೇವೀ ಭಾಗವತದ ಪ್ರಾರಂಭದಲ್ಲಿ ಈ ಧ್ಯಾನ ಶ್ಲೋಕವನ್ನು ಪ್ರಮುಖವಾಗಿ ಕೊಡಲಾಗಿದೆ.

ಈ ರೀತಿಯಲ್ಲಿ ಸಂಧ್ಯೋಪಾಸನೆಯ ಸಂಪೂರ್ಣ ಸಾಂಗೋಪಾಂಗ ವಿಧಿ ಹಾಗೂ ಗಾಯತ್ರಿಯ ಅನುಲೋಮ, ಪ್ರತಿಲೋಮಾದಿ ಜಪಗಳ ಫಲವನ್ನು ನೀಡಿ, ಕಡೆಯಲ್ಲಿ ಸಂಕ್ಷೇಪದಲ್ಲಿ ವೈಶ್ವೇದೇವ ಪ್ರಕರಣವನ್ನು ತಿಳಿಸಲಾಗಿದೆ ಬಲಿವೈಶ್ವದೇವ ನಿತ್ಯಕರ್ಮವನ್ನು ಮಂತ್ರೋಚಾರಣಪೂರ್ವಕವಾಗಿ, ಅಥವಾ ಮಂತ್ರರಹಿತವಾಗಿಯೂ ಧ್ಯಾನಿಸಬಹುದು.

ಮಂತ್ರಜ್ಞಾನವಿಲ್ಲವೆಂದು ಕರ್ಮದ ಲೋಪವನ್ನು ಮಾಡಬಾರದು ವೈಶ್ವೇದೇವ ಮಾಡುವುದರಿಂದ ದೂಷಿತ ಅನ್ನವೂ ಕೂಡ ಪವಿತ್ರ ಹಾಗೂ ಸಾತ್ತ್ವಿಕವಾಗುತ್ತದೆ.

ಅಮಂತ್ರಂ ವಾ ಸಮಂತ್ರಂ
ವಾ ವೈಶ್ವೇದೇವಂ ನ ಸಂ ತ್ಯಜೇತ್
ವೈಶ್ವದೇವಸ್ಯ ಕರಣಾತ್
ಅನ್ನದೋಷೈರ್ನ ಲಿಪ್ಯತೇ || 8/21 ||

ಈ ಗಾಯತ್ರೀ ಮಂತ್ರದ ಮಹಾತ್ಮೆಯನ್ನು ಶಾಮಾನ್ಯವಾಗಿ ಎಲ್ಲ ಸ್ಮೃತಿಗಳೂ ವರ್ಣಿಸಿವೆ. ಪ್ರಣವ ಮತ್ತು ವ್ಯಾಹತಿಗಳೊಂದಿಗೆ ಸಾವಿತ್ರೀ (ಗಾಯತ್ರಿ) ಮಂತ್ರದ ಜಪವನ್ನು ಮಾಡುವುದರಿಂದ ಎಲ್ಲ ಪಾಪಗಳೂ ದೂರವಾಗುತ್ತವೆ. (ಮನು 2/79) ಎಂದು ಮನುಸ್ಮೃತಿಯಲ್ಲಿ ತಿಳಿಸಲಾಗಿದೆ ಜಪವನ್ನು ಮಾಡಿದಲ್ಲಿ ಸಿದ್ಧಿಯು ಪ್ರಾಪ್ತವಾಗುತ್ತದೆ 'ಗಾಯತ್ರೀ... ಮುಕ್ತಿ ದಾಯಿನೀ' (5/12) ಎಂದು ಈ ವಿಷಯವನ್ನು ವಿಶ್ವಾಮಿತ್ರ ಸ್ಮೃತಿಯಲ್ಲಿ ತಿಳಿಸಲಾಗಿದೆ ಗಾಯತ್ರಿ ಜಪವನ್ನು ಸತತವಾಗಿ ಮಾಡುವುದರಿಂದ, ಮುಕ್ತಿಯು ಪ್ರಾಪ್ತವಾಗುತ್ತದೆ

* * *

# ದೇವಾಲಯ ದರ್ಶನ

ಯಾತ್ರಿಕರು ತಮ್ಮ ವಿರಾಮ ಸಮಯದಲ್ಲಿ ತಿರುಪತಿಯ ಹಾಗೂ ಪರಿಸರದ ದೇವಾಲಯಗಳನ್ನು ನೋಡಿಬರಲು ಅನುಕೂಲವಾಗುವಂತೆ ತಿ ತಿ ದೇ ಪ್ರತ್ಯೇಕವಾದ ಪ್ಯಾಕೇಜ್ ಟೂರ್‌ಗಳನ್ನು ಏರ್ಪಡಿಸಿದೆ ಅವುಗಳ ಪ್ರಯೋಜನ ಪಡೆಯದೇಕೆಂದು ವಿನಂತಿಸಲಾಗಿದೆ.

## ಸ್ಥಳೀಯ ಆಲಯ ದರ್ಶನ :

ತಿರುಪತಿಯಲ್ಲಿನ ಹಾಗೂ ಸುತ್ತಮುತ್ತಲ ಆಲಯಗಳನ್ನು ತೋರಿಸಿಕೊಂಡು ಬರುವ ಸ್ಥಳೀಯ ಆಲಯದರ್ಶಿನಿಯಲ್ಲಿ ಹೊರಟು- ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ಶ್ರೀ ಕೋದಂಡರಾಮಸ್ವಾಮಿ ದೇವಾಲಯ, ಶ್ರೀ ಗೋವಿಂದ ರಾಜಸ್ವಾಮಿ ದೇವಾಲಯ, ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಹರೇರಾಮ ಹರೇಕೃಷ್ಣ ಆಲಯ, ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಆಲಯ, ತೊಂಡವಾಡದ ಶ್ರೀ ಅಗಸ್ತ್ಯೇಶ್ವರಸ್ವಾಮಿ ಆಲಯ, ತಿರುಪತಿಯ ವಿಜ್ಞಾನಕೇಂದ್ರ (ಹತ್ತು ಗಂಟೆಯ ಆವರ್ತನದಲ್ಲಿ), ಗಳನ್ನು ನೋಡಬಹುದು

| | | |
|---|---|---|
| ಟಿಕೆಟ್ ಶುಲ್ಕ | : | ಹಿರಿಯರಿಗೆ - ರೂ 20/- ಕಿರಿಯರಿಗೆ ರೂ 10/- |
| ಬಸ್ ಹೊರಡುವ ಸ್ಥಳ | | ರೈಲ್ವೆ ನಿಲ್ದಾಣದ ಹಿಂಭಾಗದ ಸತ್ರಗಳು, ತಿರುಪತಿ |
| ಬಸ್ ಹೊರಡುವ ಕಾಲ | : | ಬೆಳಗ್ಗೆ 6 ಗಂಟೆ - ಬೆಳಗ್ಗೆ 10 ಗಂಟೆ ಮ - 3 ಗಂಟೆ. |

## ಪರಿಸರ ಆಲಯ ದರ್ಶನ :

ಪ್ರತಿ ದಿನವೂ ಬೆಳಗ್ಗೆ 6 ಗಂಟೆಗೆ ತಿರುಮಲೆಯ ಕೇಂದ್ರಸ್ವಾಗತ ಕಚೇರಿಯಿಂದಲೂ, 7 ಗಂಟೆಗೆ ತಿರುಪತಿಯ ಸತ್ರಗಳ ಬಳಿಯಿಂದಲೂ ಬಸ್ ಹೊರಟು-

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯ, ಕಾರ್ವೇಟಿನಗರದ ಶ್ರೀ ವೇಣುಗೋಪಾಲ ಸ್ವಾಮಿ ಆಲಯ, ನಾರಾಯಣವನದ ಶ್ರೀ ಕಲ್ಯಾಣವಂಕಟೇಶ್ವರಸ್ವಾಮಿ ದೇವಾಲಯ, ನಾಗುಲಾಪುರದ ಶ್ರೀ ವೇದನಾರಾಯಣಸ್ವಾಮಿ ಆಲಯಗಳನ್ನು, ನೋಡಿಕೊಂಡು ಮಧ್ಯಾಹ್ನ 1-30 ಕ್ಕೆ ತಿರುಪತಿಗೆ ಹಿಂದಿರುಗುತ್ತವ

ಟಿಕೆಟ್ ಶುಲ್ಕ: ಹಿರಿಯರಿಗೆ - ರೂ 50/-, ಕಿರಿಯರಿಗೆ - ರೂ 25/-

**ವಿವರಗಳಿಗೆ - ದೂರವಾಣಿ - 20991**

ಕಾರ್ಯನಿರ್ವಹಣಾಧಿಕಾರಿ,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ

6 ನೇ ಪುಟದಿಂದ

ದಲ್ಲಿ, ಉಳಿದ ಧರ್ಮದವರಂತೆ ನಾವೂ ಪಾಪಗಳನ್ನು ಹೋಗಲಾಡಿಸಿಕೊಳ್ಳಲು ಈ ಸಂಧ್ಯಾವಂದನೆ ನಮಗೆ ಸಹಾಯಮಾಡುವುದು. ರಾತ್ರಿಯವರೆಗಿನ ಪಾಪಗಳನ್ನು ಬೆಳಗ್ಗೆ ಮಂತ್ರರೂಪದಲ್ಲಿ ಹೇಳಿ ಹೋಗಲಾಡಿಸಿಕೊಳ್ಳಬಹುದು, ಮನಸ್ಸಿನಿಂದಲೂ, 'ವಾಕ್' ನಿಂದಲೂ, ಕೈಗಳಿಂದಲೂ, ದೇಹದ ಭಾಗಗಳಿಂದ ಮಾಡಲ್ಪಟ್ಟ ಪಾಪಗಳು ನೀಗಬೇಕೆಂದು ಹೇಳಿ ಮಂತ್ರಜಲಪಾನ ಮಾಡುತ್ತೇವೆ ಹೀಗೆ ಹಗಲಿನಲ್ಲಿ ಮಾಡಿದ ಪಾಪಗಳನ್ನು ಹಗಲಿನ ಅಧಿದೇವತೆ ಅವುಗಳನ್ನೆಲ್ಲಾ ನೀಗಿಸಿ ಕಾಪಾಡದೇಕೆಂದು ಪ್ರಾರ್ಥಿಸುತ್ತೇವೆ ಮಾಡಿದ ಪಾಪಕರ್ಮಗಳಿಗಾಗಿ ಪಶ್ಚಾತ್ತಾಪ ಪಟ್ಟು, ಆ ಭಗವಂತನಲ್ಲಿ ಕ್ಷಮೆಯಾಚಿಸಿ ಅವನ್ನು ಹೋಗಲಾಡಿಸಿಕೊಳ್ಳುತ್ತೇವೆ ಇದು ಪ್ರತಿನಿತ್ಯವೂ ಮಾಡುವ ಪ್ರಾಯಶ್ಚಿತ್ತ ಪ್ರಾಯಶ್ಚಿತ್ತ ಮಾಡಿಕೊಳ್ಳಬಹುದೆಂಬ ಉದ್ದೇಶದಿಂದ ಪಾಪಕರ್ಮಗಳನ್ನು ಮಾಡುತ್ತಲೇ ಇರಬಾರದು ಒಮ್ಮೆ ಪಾಪಕರ್ಮಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದೇ ಮತ್ತೊಮ್ಮೆ ಅದನ್ನು ಮಾಡಲೇ ಬಾರದೆಂಬ ಉದ್ದೇಶಕ್ಕಾಗಿಯೇ ಎಂಬುದನ್ನು ಸದಾ ನೆನಪಿನಲ್ಲಿಡಬೇಕು

* * *

# ಶ್ರೀಕೃಷ್ಣ ಗೋಪೀ ವಿಲಾಸಂ

- ಕಂದಾಡೈ ಕೇಶವನ್

ಕರ್ನಾಟಕಕಾವ್ಯಮಂಜರಿ ಮೈಸೂರು ಅವರು ೧೯೩೪ ರಲ್ಲಿ ಪ್ರಕಟಿಸಿದ "ಕೃಷ್ಣ ಗೋಪೀವಿಲಾಸಂ" ಎಂಬುವ ಸಾಂಗತ್ಯದ ಕಾವ್ಯ ಎಸ್. ಜಿ. ನರಸಿಂಹಾಚಾರ್ಯ ಮತ್ತು ಮ. ಅ. ರಾಮಾನುಜಯ್ಯಂಗಾರ್ ರವರಿಂದ ಪರಿಷ್ಕರಿಸಲ್ಪಟ್ಟದ್ದು. ಕನ್ನಡ ನಾಡಿಗೆ ನೀಡಿದ ಇವರ ಕೊಡುಗೆ ಅಪೂರ್ವ - ಅತ್ಯಂತ ವಿಶಿಷ್ಟವಾದದ್ದು ಈ ಮಹನೀಯರು ಸರ್ವಕಾಲದಲ್ಲಿ ಅಭಿನಂದನೀಯರು. ಇಂತಹ ಶೃಂಗಾರಮಯ ಸಾಂಗತ್ಯ ಕಾವ್ಯವನ್ನು ರಚಿಸಿದ ಕವಿ ತನ್ನ ನಾಮಧೇಯವನ್ನು ಕಾವ್ಯದಲ್ಲಿ ತಿಳಿಸಿಲ್ಲ ಅಜ್ಞಾತ ಕವಿಯ ಈ ಕಾವ್ಯದಲ್ಲಿ ಭಾಗವತ ಮನೋಧರ್ಮ ಮತ್ತು ಶೃಂಗಾರ ರಸಪ್ರಜ್ಞೆಗಳು ರಸ ಪೂರ್ಣವಾಗಿ ಸಮಾವೇಶಗೊಂಡು ಗೋಪೀಕೃಷ್ಣರ ಲೀಲಾಪ್ರಸಂಗಗಳು ಗಂಭೀರ ಶೈಲಿಯಲ್ಲಿ ಅಭಿವ್ಯಕ್ತಗೊಂಡಿವೆ.

## ಕಾವ್ಯದ ವಸ್ತು ಕೃಷ್ಣ-ಗೋಪಿ

ಕೃಷ್ಣಗೋಪೀ ವಿಲಾಸವನ್ನು ಬರೆದ ಅಜ್ಞಾತ ಕವಿ, ಪುರಾಣ ಪುರುಷರಲ್ಲಿ ಶ್ರೀಕೃಷ್ಣನ ಚರಿತೆಯನ್ನು ಆರಿಸಿಕೊಂಡು ಭಾಗವತ, ಹರಿವಂಶ, ವಿಷ್ಣುಪುರಾಣ, ಗೀತಗೋವಿಂದ ಮತ್ತು ಕೃಷ್ಣಕರ್ಣಾಮೃತ ಮೊದಲಾದ ಪುರಾಣಗಳು ಮತ್ತು ಕಾವ್ಯಗಳನ್ನು ಅಭ್ಯಾಸ ಮಾಡಿ ಈ ಕಾವ್ಯವನ್ನು ರಚಿಸಿದ್ದಾನೆ ಶ್ರೀಕೃಷ್ಣ ಗೋಪೀವಿಲಾಸಗಳ ಪ್ರಸಂಗಗಳು ಗರ್ಗಸಂಹಿತೆ ಮತ್ತು ಬ್ರಹ್ಮವೈವರ್ತಕ ಪುರಾಣಗಳಲ್ಲಿ ಹೆಚ್ಚಿಗೆ ವಿಸ್ತಾರವಾಗಿ ವರ್ಣಿತವಾಗಿವೆ. ಕನ್ನಡದಲ್ಲಿ ಕವಿ ಲಕ್ಷ್ಮೀಶನ ಜೈಮಿನಿಭಾರತ, ಕುಮಾರವ್ಯಾಸನ ಭಾರತ ಕೃಷ್ಣನ ಮಹಿಮೆ ತಿಳಿಸುವ ಮಹಾ ಕಾವ್ಯಗಳಾದರೆ, ಭಾಗವತವನ್ನು ಅನುಸರಿಸಿ ಬರೆದ ಪ್ರಸಿದ್ಧವಾದ ಕಾವ್ಯಗಳು ನಿತ್ಯಾತ್ಮಶುಕಯೋಗಿ ವಿರಚಿತ ಶ್ರೀಕೃಷ್ಣಚರಿತ್ರೆ, ರುದ್ರಭಟ್ಟನ ವಿರಚಿತ ಜಗನ್ನಾಥ ವಿಜಯಂ, ಕಪ್ಪಣ್ಣ ಕವಿ ವಿರಚಿತ ಶ್ರೀಕೃಷ್ಣ ಚರಿತಾಮೃತಂ - ಇತ್ಯಾದಿ. ಅದೇ ಮಟ್ಟಕ್ಕೆ ನಿಲ್ಲುವ ಕಾವ್ಯ ಕೃಷ್ಣ ಗೋಪೀ ವಿಲಾಸಂ. ಈ ಕವಿಗೆ ರಾಮನನ್ನು ಕಂಡರೆ ಭಕ್ತಿಯಿರಬೇಕು ತನ್ನ ಕಾವ್ಯದ ನಾಂದೀ ಶ್ಲೋಕದಲ್ಲಿ ರಾಮನನ್ನು-

ಶ್ರೀ ಮನೋಹರ ದಿವ್ಯ ಮೂರ್ತಿ ಸಂತತ ಪೂರ್ಣ
ನಾಮ ಸದ್ಗುಣ ಗಣಕೀರ್ತಿ
ರಾಮನೆನ್ನೆಯ ಹೃದಯದೊಳಿರ್ದು
ಕೃತಿಯನು
ನೇಮಿಸಿದಂತೆ ಪೇಳುವೆನು ||೧||

ಎಂಬುವುದಾಗಿ ಸ್ತುತಿಸಿ, ತರುವಾಯ ಶಾರದೆಯನ್ನು-

ಅಜನ ಪಟ್ಟದ ರಾಣಿ - ಅಖಿಲಗುಣಶ್ರೇಣಿ
ವಿಜಿತಾಬ್ಜ ಪಾಣಿ ಸುಶ್ರೋಣಿ
ಗಜರಾಜ ಗಮನೆ ಪನ್ನಗವೇಣಿ ಕಲ್ಯಾಣಿ
ಭಜಿಪೆ ವರವನೀಯೆ ವಾಣಿ

ಎಂಬುವುದಾಗಿ ಪ್ರಾರ್ಥನೆ ಮಾಡುತ್ತಾನೆ. ನಾಲ್ಕನೆಯ ಪದ್ಯದಲ್ಲಿ ತಮ್ಮ ಗುರುಗಳಾದ ಶ್ರೀ ಭಾಷ್ಯಕಾರರನ್ನು ಸ್ಮರಿಸುತ್ತಾ-

ಶೇಷನೀ ಧರೆಯೊಳಗುದಿಸಿ ಮಾನುಷದಿವ್ಯ
ವೇಷದಿಂ ಯತಿರಾಜನೆನಿಸಿ
ಪೋಷಿಸಿ ಜಗದ ಜನರನು ಪಾವನಗೈದ
ಭಾಷ್ಯಕಾರರಿಗೆ ವಂದಿಸುವೆ

ಎಂಬುವುದಾಗಿ ಕೊಂಡಾಡಿದ್ದಾರೆ.

ಸಂಸ್ಕೃತದಲ್ಲಿದ್ದ ಕೃಷ್ಣಚರಿತೆಯನ್ನು ತಾನು ಕನ್ನಡದಲ್ಲಿ ಬರೆದಿರುವುದರಿಂದ ತಪ್ಪೇನು ಇಲ್ಲ. ಗಂಗಾಜಲವನ್ನು ಗಾಜಿನ ಪಾತ್ರೆಯಲ್ಲಿ ತಂದ ಮಾತ್ರಕ್ಕೆ ಗಂಗೆಯಲ್ಲದೆ ನೀರು ಎಂಬುವುದಾಗಿ ಪರಿಗಣಿಸದೇಕಾಗಿಲ್ಲ ಎಂಬುವುದಾಗಿ ಕವಿ ತಿಳಿಸುವ ಸಮಯದಲ್ಲಿ-

ಗಂಗೆಯ ಗಾಜು ಕುಪ್ಪಿಗೆಯೊಳು
ತರಲು ತಾಂ
ಗಂಗೆಯಲ್ಲದೆ ಜಲವಹುದೆ
ರಂಗನ ಕಥೆಯ ಭಾಷಾಂತರದೊಳು ಪೇಳೆ ತಾ
ಮಂಗಳ ಮಹಿಮೆ ತಪ್ಪುವುದೆ

ಹರಿಸ್ಮರಣೆಯೇ ಮಂತ್ರ ಜಪ. ವೇದ ವೇದಾಂಗ ಅದರಿಂದ ಅಂತರಂಗಶುದ್ಧಿ ಹರಿಶರಣರ ಸಂಗ ದುರಿತವಾರಣಸಿಂಗ ಹರಿಕಥೆಯು ಅಮೃತ ತರಂಗ ಎಂಬುವುದಾಗಿ ವಿವರಿಸುತ್ತಾ ಕವಿ ಕೃಷ್ಣ ಪ್ರಸಂಗವಿಲ್ಲದ ಕಾವ್ಯ ಬರೀ ಬರಡು ಎಂಬುವುದಾಗಿ ಹೇಳುವಾಗ ಕವಿ ಲೀಲಾ ಶುಕನ ಶ್ರೀಕೃಷ್ಣ ಕರ್ಣಾಮೃತದ ಶ್ಲೋಕ-

ತ್ವಯಿ ಪ್ರಸನ್ನೇ ಮಮ ಕಿಂ ಗುಣೇನ
ತ್ವಯ್ಯ ಪ್ರಸನ್ನೇ ಮಮ ಕಿಂ ಗುಣೇನ
ರಕ್ತೇ ವಿರಕ್ತೇ ಚ ವರೇ ವಧೂನಾಂ
ನಿರರ್ಥಕಾಃ ಕುಂಕುಮ - - ಭಂಗಃ



(ಸ್ವಾಮಿ ನೀನು ಪ್ರಸನ್ನನಾಗಿರುವಲ್ಲಿ ನನ್ನ ಗುಣದಿಂದ ಏನು ಪ್ರಯೋಜನ ನೀನು ಪ್ರಸನ್ನನಾಗಿಲ್ಲದ ಪಕ್ಷ ನನ್ನ ಗುಣಗಳಿಂದ ಆಗುವುದೇನು ? ಪ್ರಿಯನು ಒಲಿದಿದ್ದರೂ, ಅನ್ಯಥಾ ಆದರೂ ಸರಿ ವಧುವಿಗೆ ಕುಂಕುಮದಿಂದ ಏನು ಪ್ರಯೋಜನ) ಈ ಭಾವವನ್ನೇ ಅನುಸರಿಸಿ ನಮ್ಮ ಕನ್ನಡದ ಕವಿ ತನ್ನ ಕಾವ್ಯದಲ್ಲಿ-

ರಂಗನ ನಾಮವಿಲ್ಲದ ಕೃತಿಯೊಳಗೆ ಪ್ರ
ಸಂಗ ರಚನೆ ಯಿದ್ದರೇನು
ಮಾಂಗಲ್ಯ ಸೂತ್ರವಿಲ್ಲದ ಯುವತಿಗೆ ಭೂಷ
ಣಂಗಳ ತೊಡಿಸಿದಂತಿಹುದು

ಎಂಬುವುದಾಗಿ ರಂಗನ ನಾಮವಿಲ್ಲದ ಕೃತಿ ಅನೇಕ ಪ್ರಸಂಗಗಳು ಇದ್ದರೂ ನಿರರ್ಥಕ ಎಂಬುದಾಗಿ ಘೋಷಿಸುತ್ತಾ ಮುಂದಿನ ಪದ್ಯದಲ್ಲಿ-

ನಿಶ್ಚಲವಾಗಿರ್ದೊಡೆಯು ಕೃತಿಯೊಳಗೆ
ನಮ್ಮ ಅಚ್ಯುತ ನಾಮವೊಂದಿರಲು
ಬಿಚ್ಚೋಲೆ ಕರಿಯ ಮಣಿಯೇ ಸಾಕು
ಪತಿಯುಳ್ಳ ಸಚ್ಚರಿತೆಯೆ ಲಕ್ಷ್ಮಿಧರೆಗೆ

ಎಂಬುವುದಾಗಿ ಹರಿ ಚರಿತೆ ಮಹಿಮೆ ಸಾರುತ್ತಾನೆ ಮುಂದೆ ಹತ್ತಾರು ಪದ್ಯಗಳಲ್ಲಿ ಕವಿ ಶ್ರೀವರನ ಅವತಾರದೊಳು ಕೃಷ್ಣದೇವನ ಪಾವನ ಚರಿತೆ-ಯದುಕುಲದರಸ ಗೋವಿಂದ ಧರೆಯೊಳವತರಿಸಿ - ನಂದ ಗೋಕುಲ ದೊಳಗಾಡಿದ ನಾಟಕ ದಂದವೆಲ್ಲವ ವಿವರಿಸುವೆ - ಎಂಬುವುದಾಗಿ ತಿಳಿಸುತ್ತಾನೆ

## ಕೃಷ್ಣಾವತಾರ

ದ್ವಾಪರಯುಗದಲ್ಲಿ ರಕ್ಕಸರ ಕಾಟ ಹೆಚ್ಚಾಗಿ, ಹಿಂಸೆ ಕ್ರೌರ್ಯ ಹೆಚ್ಚಾಗಿ ಭೂತಾಯಿ ವಿಷಾದದಿಂದ ಬ್ರಹ್ಮನನ್ನು ಮೊರೆಹೋಗಲು, ಬ್ರಹ್ಮನು ಭೂದೇವಿ ದೇವತೆಗಳ ಸಹಿತ ಕ್ಷೀರಸಮುದ್ರದಲ್ಲಿದ್ದ ವಿಷ್ಣುವನ್ನು ಸ್ತೋತ್ರಮಾಡಿದರು ನಗಧರನು ನಗುತ ನಾಲ್ಮೊಗನ (ಬ್ರಹ್ಮನ) ಬಿನ್ನಹ ಕೇಳಿ ಗಂಭೀರದಿಂದ - ಮಗನೆ ಕೇಳು ಅವನಿಯೊಳು ಅವತರಿಸುವೆನೆಂದು - ಆಶ್ವಾಸನೆ ಕೊಟ್ಟ, ವರುಣನ ಶಾಪದಿಂದ ಕಶ್ಯಪ ಅದಿತಿಯರು ಬೃಂದಾವನದಲ್ಲಿ ವಸುದೇವ ದೇವಕಿಯರಾಗಿ ಹುಟ್ಟಿರಲು ವಿಷ್ಣುವು ಅವರ ಗರ್ಭದಲ್ಲಿ ಜನಿಸಲು ತಾನು ಹಿಂದೆ ವರವ ಕೊಟ್ಟ ಪ್ರಕಾರ ನಿಶ್ಚಯಿಸಿದನು ಭಗವಂತನು ಭೂಲೋಕಕ್ಕೆ ಬರುವುದನ್ನು ಕಂಡು ದೇವತೆಗಳು ಗೋಪಾಲ ಬಾಲಕರಾಗಿ ಮುಂಚೆಯೇ ಒಂದೊಂದು ಅಂಶದಿಂದ ಅವತೀರ್ಣರಾದರು

ದೇವಕಿಗೆ ನವಮಾಸವು ತುಂಬಲು ಶ್ರಾವಣ ಮಾಸದ ಕೃಷ್ಣ ಪಕ್ಷದ ಅಷ್ಟಮಿಯಲ್ಲಿ ರೋಹಿಣೀ ನಕ್ಷತ್ರದಲ್ಲಿ - ಅದು ಜಯಂತೀ ಎಂಬ ರಾತ್ರಿಯ ಅಭಿಜಿತ್ ನಕ್ಷತ್ರವೂ ಹೌದು ಆ ಶುಭ ಮುಹೂರ್ತದಲ್ಲಿ - ಅನಂತಕೋಟಿ ಬ್ರಹ್ಮಾಂಡನಾಯಕನು ಆದ ಜಗದೀಶ್ವರನು ವಿರ್ಭೂತನಾದನು. ಇದನ್ನು ನಮ್ಮ ಕವಿ ವರ್ಣಿಸುವಾಗ-

ಆ ವನಿತಾಮಣಿಗಾದುದು ನವಮಾಸ
ಶ್ರಾವಣ ಬಹುಳಾಷ್ಟಮಿ ಯೊಳು
ಪಾವನ ರೋಹಿಣಿ ವೃಷಭ ಲಗ್ನದೊಳಾಗ
ಶ್ರೀವರನು ಅವತರಿಸಿದನು

ಆ ಶಿಶುವಿನ ವರ್ಣನೆ ಹೀಗಿದೆ-

ತರುಣಾರ್ಕ ಸದೃಶ ಕಿರೀಟದ ಕಾಂತಿಯಿಂ
ದರಳಿದ ಸರಸಿಜಾನನದ
ಕರುಣಾ ಕಟಾಕ್ಷ ಪಾಂಗದ ತೆರೆಯೊಳಗಾಳ್ವ
ಮರಕತ ಮಕರ ಕುಂಡಲದ

ಹರಿವಂಶದಲ್ಲಿ ಈ ಅವತಾರ ಘಟ್ಟವನ್ನು ವ್ಯಾಸರು ವರ್ಣಿಸುವಾಗ ಹೀಗೆಂದು-

ವಸುದೇವಸ್ತತಂ ದೃಷ್ಟ್ವಾ
ಜಾತಂ ಪುತ್ರ ಮಧೋಕ್ಷಜಂ
ಶ್ರೀವತ್ಸ ಲಕ್ಷಣಂ ದೃಷ್ಟ್ವಾವ
ಯುತಂ ದಿವ್ಯೈಶ್ಚ ಲಕ್ಷಣ್ಯೈಃ

ಭಾಗವತದಲ್ಲಿ ಕೂಡ ಆ ಶಿಶು ಚತುರ್ಭುಜನಾಗಿ ಅವತರಿಸಿದ ಎಂಬುವುದಾಗಿ ವ್ಯಾಸರು ವರ್ಣಿಸುವಾಗ-

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖ ಗದಾದ್ಯುದಾಯುಧಂ
ಶ್ರೀ ವಚ್ಛಲಕ್ಷ್ಮಂ ಗಲ ಶೋಭಿ ಕೌಸ್ತುಭಂ
ಪೀತಾಂಬರಂಸಾಂದ್ರ ಪಯೋದ ಸೌಭಗಂ

- ಎಂಬುವುದಾಗಿ ತಿಳಿಸಿದ್ದಾರೆ.

ಕವಿ ಮುಂದೆ ಚಾರು ಪೀತಾಂಬರವೆಂಬ ಮಿಂಚಿನ ನೀಲ ನೀರದದಂತೆ ವಿರಾಜಿಸುವ ವಾರಿಜೇಕ್ಷಣ ಮೂರ್ತಿಯ ಕಂಡು ವಸುದೇವ ಆ ಹರಿಯ ಶ್ರೀ ಪದವ ಭಕ್ತಿಯಿಂದ ಶಿರದೊಳಾಂತು ಪರಮ ಪುರುಷ ನಮೋ ಎಂದನಂತೆ. ಅನ್ನಮಾಚಾರ್ಯರು "ಬ್ರಹ್ಮಕಡಿಗಿನ ಪಾದಮು" ಎಂಬುವ ಕೀರ್ತನೆಯಲ್ಲಿ ಹಾಡಿರುವಂತೆ ಈ ಕವಿಯೂ ಕೂಡ "ಸರಸಿಜ ಭವ, ಭವೇಂದ್ರಾದಿಗಳ್, ತವ ಪಾದ ಸರಸಿಜವನು ಕಾಣಲರಿದು" ಎಂಬುವುದಾಗಿ ತಿಳಿಸಿದನು ತಂದೆ ತಾಯಿಗಳ ಅಪ್ಪಣೆಯಂತೆ ಆ ಅದ್ಭುತ ಶಿಶು ದಿವ್ಯರೂಪಮಂ ಮರೆಸಿ ತಾ ಮನುಜ ಶಿಶುವ ರೂಪತಾಳಿದನಂತೆ.

ಕೃಷ್ಣನ ಶೈಶವ ಲೀಲೆಗಳಲ್ಲಿ ಮೊದಲನೆಯದು ಪೂತನೀ ಸಂಹಾರ. ಕಂಸನಿಂದ ಪ್ರೇರಿತಳಾದ ರಕ್ಕಸಿ ಪೂತನಿಯು ಪರಮ ರೂಪವತಿ ವೇಷ ಧರಿಸಿ ನಂದಗೋಕುಲಕ್ಕೆ ಬಂದು-

ಚಲ್ಲ ಸಿಸುವನು ಮುದ್ದಿಸಿ ಮಡಲಿನೊಳಿಟ್ಟು
ಮೆಲ್ಲ ನಿತ್ತಳು ವಿಷ ಮೊಲೆಯಾ
ಕಂಡನಾ ದಾನವಾಂತಕನು ಪೂತನಿ
ಮಾಳ್ಪಲಂಡ ಬುದ್ಧಿಯನು ಚಿತ್ತದಲಿ

ಆಕೆಯಸ್ತನವನ್ನು ಬಲವಾಗಿ ಕಚ್ಚಿ ಆಕೆಯ ಪ್ರಾಣವನ್ನೇ ಹೀರಿದನೆಂದು ಕವಿ ವರ್ಣಿಸಿದ್ದಾನೆ ಘಾತಕಿ ಪೂತನಿ ಕೃಷ್ಣನ ಕೃಪೆಯಿಂದ ಸ್ವರ್ಗ ನಿಕೇತನವನ್ನು ಸೇರಿದಳು.

ಎರಡನೆಯ ಲೀಲೆ ಶಕಟಾಶುರ ವಧೆ. ಪೂತನಿಯು ಅಳಿದಳೆಂಬುದ ಕೇಳಿ ಕಂಸ ತನ್ನಯ ದೂತ ಖಳನಾದ ಶಕಟಾಸುರನನ್ನು ಕಳುಹಿಸಿದನು. ಇಲ್ಲಿ ಕವಿ ಈ ವಿಪರ್ಯವನ್ನು ಬಣ್ಣಿಸುವಾಗ-

ನಂದಭವನದಿ ಕುಂದಣದ
ತೊಟ್ಟಿಲೊಳು ಗೋ
ವಿಂದನಾ ನಂದದಿಂದಿರಲು
ಬಂದು ರಕ್ಕಸ ಭಂಡಿ ಯಂದದಿಂ ಪಾದಾರ
ವಿಂದದ ಬಳಿಯ ಸೇರಿದನು

ಮಲಗಿದ್ದ ಆ ಶಿಶುವನ್ನು ಕೊಲ್ಲಬೇಕೆಂದು ಬಂಡಿಯಾಕಾರದ ಶಕಟಾಸುರನು ಉರುಳುತ್ತ ಬಂದು ಬೀಳಲು ಆಗ ಹರಿಯು ಆ ಬಂಡಿಯನ್ನು ಕಾಲಿನಿಂದ ಒದೆಯಲು ಶಕಟನು ಸಿಡಿಲು ಹೊಡೆದಂತೆ ಬಿದ್ದು ಸತ್ತನು ಇದನ್ನು ಕಂಡ ಗೋಪಿಯರು ಆಶ್ಚರ್ಯದಿಂದ ಮಗುವನ್ನು ಮುದ್ದಿಸಿದರು ಆ ಸಮಯದಲ್ಲಿ ಕವಿ-

ಏಸು ಜನ್ಮದ ಸುಕೃತವೋ ಗೋಪ
ಗೋಪಿಯರೀ ಸದಾನಂದ ಮೂರ್ತಿಯನು
ಕೂಸಿ ನಂದದೊಳು ತಕ್ಕವಿಪರಿವರ
ಪುಣ್ಯರಾಶಿ ಯಿನ್ನೆಂತೂ ಕೇಳಬಲೆ

ಎಂಬುವುದಾಗಿ ಗೋಪಗೋಪಿಯರ ಸುಕೃತ ಮಹಾಭಾಗ್ಯವನ್ನು ಕೊಂಡಾಡುತ್ತಾನೆ.

ಮುಂದೆ ತೃಣಾವರ್ತನ ಸಂಹಾರ · ತೃಣಾವರ್ತನೆಂಬ ಕಂಸದೂತನು ಬಿರುಗಾಳಿಯಾಗಿ ಬಂದು ಗೋಕುಲದಲ್ಲೆಲ್ಲ ಕೆಂಧೂಳನ್ನು ಚೆಲ್ಲಿ ಗಿಡಮರ ಬಳ್ಳಿಗಳನ್ನು ಮುರಿದು ಕೃಷ್ಣನನ್ನು ಎತ್ತಿಕೊಂಡು ಅಂಬರಕ್ಕೆ ಹಾರಿದಂದಲೆ ಮಾಡುತ್ತಿರುವಾಗ ಎಲ್ಲರೂ ಗಾಬರಿಯಿಂದ ತಲ್ಲಣಿಸುತ್ತಿರುವಾಗ ಕವಿಯ ಈ ಅದ್ಭುತ ವರ್ಣನೆಯನ್ನು ನೀವು ಓದಿ ಆನಂದಿಸಿ-

ಅಂಬರಕಡರಿ ದಾನವ ಸುಳಿಸುಳಿದು ವಿ
ಶ್ವಂಭರ ನೊಡನಾಡುತಿರಲು
ಪಂಬಲಿಸುತಲಿ ಮೇಲ್ನೋಡುತ ಗೋಪ ಕ
ದಂಬ ಚಿಂತಿಸುತಿರ್ದುದಾಗ

ಆಗ ಕೃಷ್ಣನು ಆಕಾಶದಲ್ಲಿ ತೃಣಾವರ್ತನ ಕೊರಳನ್ನು ಎರಡು ಕೈಗಳಿಂದಲೂ ಹಿಡಿದು ಅಮುಕಲು ದಾನವನ ಪ್ರಾಣ ದೇಹದಿಂ ತೆರಳಿತು ನಿಮಿಷ ಮಾತ್ರದಲಿ ಧರೆಗೆ ಬೀಳಲು ಗಿರಿಯಂತೆ ದಾನವನ ಶವ ಗೋಕುಲದ ಬಳಿ. ಆ ಶವದ ಬಳಿ ಕೃಷ್ಣನು ಆಡುತ್ತಿರುವುದನ್ನು ಕಂಡ ನಂದನ ಕಾಂತೆ ಯಶೋದೆ ಮುಕುಂದನನ್ನು ಎತ್ತಿಕೊಂಡು ಮುದದಿ ಮುದ್ದಿಸಿ ಮಂದಿರಕ್ಕೆ ತಂದು ದೃಷ್ಟಿತೆಗೆದಳು, ಎಲ್ಲಾ ಗೋಪೀವೃಂದದೊಡನೆ.

ಮುಂದಿನಪ್ರಸಂಗ ಯಮುಳಾರ್ಜುನ ಭಂಗ: ಕೃಷ್ಣ ಬಲರಾಮರು ವ್ರಜ ಭೂಮಿಯಲ್ಲಿ ತಮ್ಮ ಆಟ ಪಾಟಗಳಿಂದ ಅಲ್ಲಿನ ಜನರನ್ನು ರಂಜಿಸುತ್ತಿದ್ದರು. ಕಂಡ ಜನರೆಲ್ಲರನ್ನು ಅಣಿಕಿಸಿ ನಕ್ಕು ನಗಿಸಿ, ಚೇಷ್ಟೆಮಾಡಿ ನಲಿದು ಉಲಿದು ಒಲೆದು ಅಲೆದು ಆಡುತ್ತಿದ್ದರು. ತಾಯಿ ಯಶೋದೆಗೆ ಕೃಷ್ಣನ ಕಿರಿಕಿರಿಯನ್ನು ತಾಳದ ಗೋಪಿಯರು ಅವನ ಹಾವಳಿ ತಾಳದೆ ದೂರಿದರು ಅವನ ಕಿಡಿಗೇಡಿತನಕ್ಕೆ ಬೇಸತ್ತ ಯಶೋದೆ ಅವನ ಸೊಂಟಕ್ಕೆ ಹಗ್ಗವನ್ನು ಬಿಗಿದು ಒಂದು ಒರಳುಕಲ್ಲಿಗೆ ಸುತ್ತಿ ಕಟ್ಟಿದಳು. ಈ ಪ್ರಸಂಗವನ್ನು ಕವಿ ವರ್ಣಿಸುವಾಗ ಕೃಷ್ಣನ ಸೊಂಟಕ್ಕೆ ಹಗ್ಗ ಬಿಗಿಯಲು ಸಾಲದೆ ನಂದಗೋಕುಲದಲ್ಲಿದ್ದ ಎಲ್ಲಾ ಹಗ್ಗಗಳನ್ನು ತಂದು ಕಟ್ಟಿದರೂ ಆಗದೆ ಸೋತಾಗ ಕೃಷ್ಣ ತಾಯಿಯ ಮಮತೆಗೆ ಓಗೊಟ್ಟು ಹಗ್ಗದಿಂದ ಕಟ್ಟಲ್ಪಟ್ಟನಂತೆ

ಇಂತು ಸಾಸಿರ ರಜ್ಜುಗಳ ತಂದು ನೋಡಲ
ನಂತ ಮಹಿಮೆಗಳು ನಡೆದು
ಎಂತಿದಕೆನುತ ನುಡಿದು ನಂದನ ಕಾಂತೆ
ಕಂತು ಪಿತನ ನೋಡುತಿರಲು

ಜನನಿಯ ಕಂಡು ನಗುತ ಕೃಷ್ಣ ತನ್ನಯ ತನುವ ಸಂಕಟಿಸೆ ವೇದಕೆ ವಾದಕೆ ಜಗ್ಗದ ಹರಿಯು ತಾಯಿಯ ಪ್ರೇಮದ ಹಗ್ಗಕೆ ಬಗ್ಗಿದನಂತೆ ಗುಮ್ಮನಿಗೆ ಒಪ್ಪಿಸುವೆನೆಂದು ತಾಯಿ ಯಶೋದೆ ಗಮ್ಮನೆ ಮಸವಾರ್ತೆ ಗಮ್ಮನಾರಲು ಕೃಷ್ಣ ಹಮ್ಮೆದ್ದು ಚಿಕ್ಕ ಬಾಲಕರಂತೆ ಚಾರುಚರಣಗಳಿಂದ ಒರಳನ್ನು ಎಳೆದುಕೊಂಡು ಹೋಗಿ ಯಮುಳಾರ್ಜುನರೆಂಬ ಹೆಸರಿನ ಎರಡು ಮರಗಳ ಮಧ್ಯೆ ಹೊರ ಹೊರಡಲು ತರು ಮುರಿದು ಬಿದ್ದುದು ಗೊಲ್ಲ ಪುರ ದೆರಗಾಗೆ ಜಜ್ಜರಿಸಿ ಎಂಬುವುದಾ ಕವಿ ವರ್ಣಿಸಿದ್ದಾನೆ ಮರಗಳೆರಡೂ ಕುದೇರ ಪುತ್ರರು. ಮುನಿಯ ಶಾಪದಿಂದ ಮರಗಳಾಗಿದ್ದರು. ಕೃಷ್ಣನ ಚರಣ ಸೋಂಕಲು ಅವರಿಗೆ ಶಾಪವಿಮೋಚನೆಯಾಯಿತು ಅಂದಿನಿಂದ ಕೃಷ್ಣನಿಗೆ ದಾಮೋದರ ಪಟ್ಟ, ಹೊರಗಣ ಇಂದ್ರಿಯ ನಿಗ್ರಹಣಕ್ಕೆ 'ದಮ' ವೆನ್ನುತ್ತಾರೆ. 'ಉದ್' ಎಂದರೆ ಮೇಲೆ 'ಋ' ಎಂದರೆ ಗಮನ ಉದರ ಎಂದರೆ ಉಚ್ಚಗತಿ ದಮದಿಂದ ಯಾರು ಉಚ್ಚಸ್ಥಾನವನ್ನು ಹೊಂದುವನೋ ಅವನು ದಾಮೋದರ. ದಾಮ ಅಂದರೆ ಹಸುವಿನ ಹಗ್ಗ, ಉದರ ಅಂದರೆ ಹೊಟ್ಟೆ. ಹಸುವಿನ ಹಗ್ಗದಿಂದ ಯಾರು ಹೊಟ್ಟೆಗೆ ಕಟ್ಟಲ್ಪಟ್ಟನೋ ಅಂತಹ ಕೃಷ್ಣನು ದಾಮೋದರ ಹೊಟ್ಟೆಗೆ ಹಗ್ಗ ಕಟ್ಟಿದ ಹುಡುಗ ದಾಮೋದರನಾದ.

ಕಾವ್ಯಾದಿಗಳಲ್ಲಿ ಚಿತ್ರಿತವಾದ ವಸ್ತು ಭವ್ಯವಾಗಿರದೇಕು ಪದಪ್ರಯೋಗ ಚೆನ್ನಾಗಿರದೇಕು ಕಾವ್ಯ ರಸವತ್ತಾಗಿರದೇಕಾವರೆ ಸ್ಥಾಯಿ ವ್ಯಜಿಂತವಾಗಿ ಧ್ವನಿಯನ್ನು ಸೂಚಿಸಿ ವಸ್ತು ಸೌಂದರ್ಯದಿಂದ ಸರಲವಾಗಿ ಸಹೃದಯನ ಮನಸ್ಸಿಗೆ ಸುಖವನ್ನು ಕೊಡದೇಕು. ಕೃಷ್ಣನ ಬಾಲಲೀಲೆಗಳನ್ನು ಅವನ ನಡೆ, ನುಡಿ, ಹಾವ ಭಾವಗಳನ್ನು ಕವಿತೆಗೆ ಹೋಲಿಸಿ ಆ ಪದಗಳ ಜೋಡಣೆಯನ್ನು ಕವಿ ಎಷ್ಟು ಚೆನ್ನಾಗಿ ತಿಳಿಸಿದ್ದಾನೆ ನೀವೇ ನೋಡಿ.

ಪದರಚನೆಗಳಿಂದ ಚದುರ ವಾಕ್ಯಗಳಿಂದ
ಮಧುವ ಸೂಸುವ ದನಿಯಿಂದ
ಮೃದು ನಯನ ನವರಸ ಭಾವ ಗರ್ಭಿತವಾದ
ಸದಮಳ ಕವಿತೆಯಂತೆಸೆದ ||೧||

ಅಂದೆಗಾಲಿಡುತ ರತ್ನ ಸ್ಥಳದೊಳು ತನ್ನ
ಬಿಂಬವ ಕಂಡು ಕರೆಯಲು
ಅಂಬುಜಾಂಬಕ ತನ್ನ ಕರೆದನೆನುತ ಬಂದು
ಕುಂಭಿನಿ ನಿಂದು ಕೈ ಮುಗಿಯೆ ||೨||

ಈ ಅಂದೆಗಾಲಿಡುವ ಕೃಷ್ಣನ ವರ್ಣನೆ ಲೀಲಾಶುಕನ ಕೃಷ್ಣ ಕರ್ಣಾಮೃತದ ಶ್ಲೋಕ "ರತ್ನಸ್ಥಲೇ ಜಾನು ಚರಃ ಕುಮಾರಃ" ಎಂಬುವುದನ್ನು ಹೋಲುತ್ತ ಯೋಗಿಗಳಿಗೆ ಎಟುಕದ ವೇದಗಳೂ ಇವನ ಮಹಿಮೆ ಅರಸಿಹೋಗಿ ಹೊಗಳಲಾರದೆ ಹಿಂತಿರುಗಿರುವಾಗ, ಬ್ರಹ್ಮಾದಿಗಳೂ ಕೂಡ ಇವನನ್ನು ಕಾಣದಿರುವಾಗ ಯಶೋದೆ ಇವನನ್ನು ತನ್ನ ಪ್ರೇಮದಲ್ಲಿ ಕಟ್ಟಿ ಹಾಕಿದಳಂತೆ ಕವಿಯ ವಾಣಿ ಹೀಗಿದೆ

ಮುಟ್ಟಲರಿಯವು ಯೋಗಿಗಳ ನಿರ್ಮಲಚಿತ್ತ
ತಟ್ಟದುವರಸಿ ವೇದಗಳು
ನಿಟ್ಟಿಸಲಳವೆ ಬ್ರಹ್ಮಾದಿಗಳೀತನ
ನಟ್ಟಿ ಪಿಡಿದಳು ಯಶೋದೆ

## ವೇಣು ವಿಲಾಸ ಶತಕಂ

ಈ ಶತಕದಲ್ಲಿ ಕಮನೀಯ ಕಿಶೋರ ಮುಗ್ಧ ಮೂರ್ತಿಯ ಅವನ ಇಂಪಾದ ಕೊಳಲ ದನಿಯಿಂದ ಮುರಾರಿಯ ಮಧುರಿಮತೆಯ ಕೊಳಲ ಗಾನದಲ್ಲಿ ಅವನ ಜಾಣ್ಮೆಯನ್ನು ಕವಿ ತಿಳಿಸಿದ್ದಾನೆ ವತ್ಸಾಸುರ ಬಕಾಸುರ ಸಂಹಾರ, ಕಾಲಿಂಗಮರ್ಧನ, ಧೇನುಕಾಸುರ ಮತ್ತು ಉರಗಾಸುರರ ವಧೆ. ಗೋಲೋಕದ ಹಸುಗಳನ್ನು ಕಾಯ್ದ ಗೋವಿಂದನು ಗೋವರ್ಧನ ಗಿರಿಯನೆತ್ತಿದ ಆ ನಾರಾಯಣನಿಗೆ ಇಂದ್ರನು ಕ್ಷೀರಾಭಿಷೇಕವನ್ನು ಮಾಡಿದ ಪ್ರಸಂಗಗಳು.

## ರಾಸಕೇಳಿಯ ರಂಗರಸಿಕ

ಭಾಗವತದಲ್ಲಿ, ಹರಿವಂಶದಲ್ಲಿ ಮತ್ತು ವಿಷ್ಣು ಪುರಾಣ ಹಾಗೂ ಬ್ರಹ್ಮ ವೈವರ್ತ ಪುರಾಣಗಳಲ್ಲಿ ಬರುವ ರಾಸಕ್ರೀಡೆಯ ಘಟ್ಟ ಬಹಳ ಅದ್ಭುತ

ವಾದದ್ದು. ರಮಣೀಯವಾದದ್ದು - ರಾಸವೆಂದರೆ ಭಾಗವತದ ವ್ಯಾಖ್ಯಾನಕಾರ ಶ್ರೀಧರಸ್ವಾಮಿಗಳು. "ಅನ್ಯೋನ್ಯ ವ್ಯತಿಷಕ್ತ ಹಸ್ತಾನಾಂ ಸ್ತ್ರೀ ಪುಂಸಾಂ ಗಾಯತಾಂ ಮಂಡಲೀ ರೂಪೇಣ ಭ್ರಮತಾಂ ನೃತ್ಯ ವಿನೋದೋ ರಾಸೋ ನಾಮ" (ರಾಸವೆಂದರೆ ಗಂಡಸರೂ ಹೆಂಗಸರೂ ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದು ಹಾಡುತ್ತ ಹಾಡುತ್ತಾ ಮಂಡಲಾಕಾರದಲ್ಲಿ ನಿಂತು ನಲಿಯುವ ನೃತ್ಯಕ್ಕೆ ರಾಸವೆಂದು ಹೆಸರು ಭಾಗವತದ ದಶಮಸ್ಕಂದದ ೨೯ ರಿಂದ ೩೩ ನೇ ಅಧ್ಯಾಯಗಳು ರಾಸ ಪಂಚಾಧ್ಯಾಯಗಳೆಂದೇ ಪ್ರಸಿದ್ಧವಾಗಿವೆ. ವಿಷ್ಣು ಪುರಾಣದಲ್ಲಿ-

ಗೋಪೀ ಪರಿವೃತೋ ರಾತ್ರಿಂ
ಶರಚ್ಚಂದ್ರ ಮನೋ ರಮಾಂ
ಮಾನಯಾ ಮಾಸ ಗೋವಿಂದೋ
ರಾಸಾರಂಭ ರಸೋತ್ಸುಕಃ

(ಗೋವಿಂದನು ಶರಚ್ಚಂದ್ರನಿಂದ ಮನೋಹರವಾದ ರಾತ್ರಿಯಲ್ಲಿ ಗೋಪೀಜನಗಳಿಂದ ಸುತ್ತುವರಿಯಲ್ಪಟ್ಟು ರಾಸಕ್ರೀಡೆಯಲ್ಲಿ ಉತ್ಸುಕನಾದನು)

ರಾಕಾಚಂದ್ರ
ವಿರಾಜಿತವಾದ ಯಮುನಾ ಸಮೀರಣ, ಲೀಲಾ ಕಂಪಿತ ತರು ಪಲ್ಲವ ಶೋಭಿತ ಕುಸುಮಿತವನ ದೋಷರಹಿತ ಕಿಶೋರ ಕೃಷ್ಣ ಗೋಪಾಂಗನೆಯರಿಂದ ಕೂಡಿ ಲೀಲಾ ವಿಲಾಸಗಳನ್ನು ಮಾಡಿದನ - ಎಂಬುವುದಾಗಿ ಹರಿ ವಂಶದಲ್ಲಿ ತಿಳಿಸಿರುವಂತೆ. ಕೃಷ್ಣಗೋಪೀ ವಿಲಾಸವನ್ನು ಬರೆದ ಕವಿ ರಾಸಕ್ರೀಡೆಯನ್ನು ರಂಜಿತವಾಗಿ ಚಿತ್ರಿಸಿದ್ದಾನೆ. ಹೀಗೆಂದು ಆ ಗೋಪಿಯರ ಪುಣ್ಯ ಭಾಗ್ಯವನ್ನೂ ಕೊಂಡಾಡಿದ್ದಾನೆ ಕವಿ - ಮಾಧವನು ವೇದಮಂತ್ರದಂತೆ. ಗೋಪಿಯರು ವೇದಗಳ ಶಾಖೆಗಳಂತೆ. ತಪವ ನಾಚರಿಸಿ ಕಾಣದ ದೇವತೆಗಳಿಗೂ ಸಿಗದ ಭಾಗ್ಯ ಈ ಗೋಪಿಯರಿಗಾಯಿತಂತೆ-

ಆವನ ಪದವನರಸಿ ಕಾಣಲಾರದೆ
ದೇವರು ತಪವನಾಚರಿಸಿ
ಆ ವನಿತೆಯರ ಪುಣ್ಯದ ಕಡೆಮೊದಲುತಾ
ನಾವು ದೆಂಬುದ ಬಲ್ಲವರಾರು

ಮಾಧವ ವೇದ ಪಾದಪವಾಗೆ ಗೋಪಿಯ
ರಾದರಾ ಶಾಖೆಗಳಂತೆ
ಮಾಧುರ್ಯ ವೇಣುರವಾಮೃತ ಸ್ವರವೆನ
ಲಾದಿ ಪುರುಷನೆಸೆದಿರ್ದ

ಶ್ರೀಕೃಷ್ಣ ಕರ್ಣಾಮೃತದಲ್ಲಿ ಲೀಲಾ ಶುಕನು ವರ್ಣಿಸಿದ ರಾಸಕ್ರೀಡಾ ಶ್ಲೋಕದ ಪ್ರತಿರೂಪ ವನ್ನೇ ಕವಿ ತನ್ನ ಕಾವ್ಯದಲ್ಲಿ ಹೀಗೆಂದು ಚಿತ್ರಿಸಿದ್ದಾನೆ ನೈಜ ಚಿತ್ರ ನಿತ್ಯ ನೂತನವಾದದ್ದು.

## ಲೀಲಾಶುಕ :

ಅಂಗನಾಂ ಅಂಗನಾಂ ಅಂತರೇ ಮಾಧವೋ
ಮಾಧವಂ ಮಾಧವಂ ಚಾಂತ ರೇಣಾಂಗನಾ
ಇತ್ಥಮಾ ಕಲ್ಪಿತೇ ಮಂಡಲೇ ಮಧ್ಯಗಃ
ಸಂಜಗೌ ವೇಣುನಾ ದೇವಕೀ ನಂದನಃ

(ನಾರೀ ನಾರೀ ನಡುವೆ ಮುರಾರಿ. ಹರಿಗೆ ಹರಿಗೆ ನಡುವೆ ಒಯ್ಯಾರಿ ನರ್ತಿಸಿ ಸ್ತುತಿಸುವ ಗೋಪೀಮಂಡಲ ನುಡಿಸಿದನು ಕೊಳಲ ರಾಸ ಕ್ರೀಡೆಯ ದೇವಕೀನಂದನ.)

## ಕೃಷ್ಣ ಗೋಪೀ ವಿಲಾಸಂ ಕವಿತೆ :

ಒಬ್ಬ ಕೃಷ್ಣಗೊಬ್ಬ ಗೋಪಕಾಮಿನಿಗೊಬ್ಬ
ಶ್ರೀ ಪತಿಯಾ ಪರಿಯೆನಿಸಿ
ಒಬ್ಬರೊಬ್ಬರನು ಕೈವಿಡಿದು ಮಂಡಲದಂತೆ
ವ್ಯಾಪಿಸಿ ಸುತ್ತುವರಿದರು

ಅನಿತು ಗೋಪಿಯರಿಗನಿತು ಕೃಷ್ಣನಾದನು
ಕನಕ ನೀಲದ ಮಣಿಗಳನು
ವನಿತೆ ವಲ್ಲಭ ಭುಜ ಸೂತ್ರ ಗರ್ಭಿತಮಾಗಿ
ದನುಪಮೈಕಾವಳಿಯಂತೆ

ಮಂಡಲ ಮಧ್ಯದೊಳಗೆ ನಿಂದು ಹರಿ ಹರಿ
ಮಂಡಲಾಂತರ್ವರ್ತಿಯಂತೆ
ಪುಂಡರೀಕಾಕ್ಷ ನಾಡಿದನು ರಾಸಕ್ರೀಡಾ
ತಾಂಡವ ನೃತ್ಯಲೀಲೆಗಳಾ

ಕವಿ ಈ ಶೃಂಗಾರ ದ್ವಿತೀಯ ಸಪ್ತತಿಯನ್ನು ಪೂರ್ಣ ಮಾಡುವ ಮುನ್ನ ಕಂತುಪಿತನ ಕದಪನು ಚುಂಬಿಸಿದ ಳೆಂತೋ ಕಾಮಿನಿಯ ಸೌಭಾಗ್ಯ" ಎಂಬುವುದಾಗಿ ಹೇಳುವಾಗ ಬಲ್ಲವ ಭಾಮಿನಿಯರು ಕಿಶೋರ ಕೃಷ್ಣನೊಡನೆ ಸರಸ ಶೃಂಗಾರ ಕೇಳಿ ವಿಲಾಸಗಳನ್ನು ಮಾಡಿ ತಣಿದರು. ಪುರಂದರ ದಾಸರೂ ಕೂಡ-

ರಂಗ ಕೊಳಲನೂದಲಾಗ
ಮಂಗಳ ಮಯವಾಯ್ತು ಧರೆ ಜ
ನಂಗಳು ಚೈತನ್ಯ ಮರೆದು
ರಂಗ ಧ್ಯಾನ ಪರರಾದರು

ಕಾರಣ ಸಕಲರೊಳಗೆ ದೇವನೀತನೆ ಪರಿಪೂರ್ಣಕಾಮನು ಯೋಗೀಶ್ವರನು. ಅಗಣಿತ ಗುಣನಿಧಿ ಜಗವ ಮೋಹಿಪ ಕೃಷ್ಣನು. ಹದಿನಾಲ್ಕು ಜಗವ ಪೊರೆವ . ಪುರುಷೋತ್ತಮನು ಕಿಶೋರಭಾವ ಕೃಷ್ಣನು. ಎಂಟುವರ್ಷದ ಮುಗ್ಧ ಮೂರ್ತಿ ಮಂಗಳಕರನು ಎಂಬುವುದಾಗಿ ತಿಳಿಸಿದ್ದಾರೆ ಪ್ರಪಂಚದಲ್ಲಿ ಮಾಧವನ ಅಧರಪಾನವನ್ನು ಮಾಡಿ ಅದರ ಸವಿಯನ್ನು ಕಂಡವರು ನಾಲ್ಕರು ಧನ್ಯರಂತೆ. (ಶಂಖ) ಶಂಖು, ವೇಣು, ಕಮಲೆ ಮತ್ತು ಗೋಪ ಸ್ತ್ರೀಯರು ಎಂಬುವುದಾಗಿ ಕವಿ ತಿಳಿಸುವಾಗ-

ಅಂಬುಜ ವದನನಧರ ಪಾನವನು ಮಾಳ್ಪ
ವೆಂಬ ಧನ್ಯರು ನಾಲ್ವರುಂಟು
ಕಂಬು ಕೊಳಲು ಕಮಲಾದೇವಿ ಗೊಪನಿ
ತಂಬಿನಿಯರಿಗೆ ಪಾಲಾಯ್ತು

ಕವಿ ತನ್ನ ಕಾವ್ಯವನ್ನು ಮುಗಿಸುವಾಗ -

ಪತಿತ ಪಾವನ ಪುಣ್ಯ ಚರಿತ ಮಾಧವ ಗೋಪ
ಸತಿಯರ ಕೇಳೀವಿಲಾಸ
ವ್ರತ ಜಪ ತಪ ಶತ ಕ್ರತುವ ಮಾಡಲು
ಭಾಗವತ ದೊಳಕ್ಕರ ಕೆಣೆಯಹುದೆ

ಎಂಬುವುದಾಗಿ ತಿಳಿಸುತ್ತಾ, ಈ ಕಾವ್ಯವನ್ನು ವಿವೇಕದಿಂದ ಕೇಳ್ವ ಮಾನವರಿಗೆ-

ದೇಕೆಂಬ ಪುರುಷಾರ್ಥ ಬಂದು ನಿಮಿಷ
ದೊಳು
ತಾ ಕೈಯ ಮುಗಿದು ಕಾದಿಹದು
ಇದು ಕೃಷ್ಣಗೋಪೀ ವಿಲಾಸಮೂರ್ತಿ ಧ್ಯಾನ
ವಿದು ಮುಕ್ತಿ ಮಾರ್ಗ ಸೋಪಾನ
ಯದುಕುಲೇಶನ
ವೇದಣುಗಾನಸುಧಾಪಾನ
ಹೃದಯದಿ ನೆಲಸೆ ಸುಮ್ಮಾನ

ಎಂಬುವುದಾಗಿ ತನ್ನ ಕಾವ್ಯವನ್ನು ಸಮಾಪ್ತ ಮಾಡಿದ್ದಾನೆ.



# ವಿಷ್ಣುಪುರದ ಆಲಯಗಳು

- ಆದ್ಯರಾಮಾಚಾರ್ಯ

ಎಂಟನೇ ಶತಮಾನದಿಂದ ಭಾರತದಲ್ಲಿ ಮಲ್ಲವಂಶದ ರಾಜ್ಯಾಡಳಿತವು ಆರಂಭಗೊಂಡಿತು. ಮುಂದೆ ಬಂಗಾಲದಲ್ಲಿ ಆಂಗ್ಲರ ಅಧಿಪತ್ಯವಿರುವವರೆಗೆ ಅದು ನಡೆದುಬಂದಿತು. ಈ ರಾಜ್ಯಕ್ಕೆ ಬಾರಕೂರ, ಮದೀನಾಪುರ, ಬರ್ದವಾನ್ ಜಿಲ್ಲೆ ಹಾಗೂ ಛೋಟಾನಾಗಪುರದ ಕೆಲವು ಭಾಗಗಳು ಸೇರಿಗೊಂಡಿದ್ದವು. ವಿಷ್ಣುಪುರವು ಮಲ್ಲವಂಶದವರ ರಾಜಧಾನಿಯಾಗಿತ್ತು ಹದಿನಾರನೇ ಶತಮಾನದಿಂದ ಹದಿನೆಂಟನೇ ಶತಮಾನದವರೆಗೆ ಈ ವಂಶದವರು ರತ್ನಪ್ರಾಯವಾದ ಅನೇಕ ಸುಂದರ ದೇವಾಲಯಗಳನ್ನು ನಿರ್ಮಿಸಿದರು ವಿಷ್ಣುಪುರವು ಕಲೆ, ಸಂಸ್ಕೃತಿ, ವಾಸ್ತುಶಿಲ್ಪ ಹಾಗೂ ಲಲಿತಕಲೆಗಳಿಗೆ ಬಹು ಪ್ರಸಿದ್ಧಿ ಹೊಂದಿತು ಅಂದಿನ ಕಾಲದಲ್ಲಿ ರಚಿತವಾದ ಕಲಾಕೃತಿಗಳನ್ನು ವೀಕ್ಷಿಸಲು ಇಂದಿಗೂ ತಂಡೋಪತಂಡವಾಗಿ ಪ್ರವಾಸಿಗರು ವಿಷ್ಣುಪುರಕ್ಕೆ ಬಂದು ಹೋಗುವದುಂಟು.

ವಿಷ್ಣುಪುರವು ಪಶ್ಚಿಮ ಬಂಗಾಲದ ಬಾರಕೂರ ಜಿಲ್ಲೆಯಲ್ಲಿ ಕಲಕತ್ತಾದಿಂದ ೧೫೩ ಕಿ.ಮೀ ಅಂತರದಲ್ಲಿದೆ. ಒಂದು ಕಾಲದಲ್ಲಿ ರಾಜಧಾನಿಯಾಗಿ ಮೆರೆದ ಈ ಸ್ಥಳವು ಇಂದು ಸಾಮಾನ್ಯ ಗ್ರಾಮವಾಗಿ ಪರಿವರ್ತನೆಗೊಂಡಿದೆ. ಪ್ರತಿಯೊಂದು ದೇವಾಲಯಗಳ ಹೊರಭಾಗದಲ್ಲಿ ಬಿಡಿಸಲಾದ ಆನೆ, ಕುದುರೆ, ಪಶುಪಕ್ಷಿಗಳ ಸಾಲುಗಳ ಮಧ್ಯದಲ್ಲಿ ಯೋಧರು ಯುದ್ಧಸನ್ನದ್ಧರಾಗಿ ಹೊರಟ ದೃಶ್ಯಗಳನ್ನು ಕಾಣಬಹುದಾಗಿದೆ. ಮೇಲೆ ಭಾಗದಲ್ಲಿ ಕೃಷ್ಣಾವತಾರದ ಅನೇಕ ಲೀಲಾವಿನೋದಗಳನ್ನು ಮೋಹಕವಾದ ರೀತಿಯಲ್ಲಿ ಬಿಡಿಸಲಾಗಿದೆ. ಒಂದು ಭಾಗದಲ್ಲಿ ಭೀಷ್ಮರು ಶರಪಂಜರದಲ್ಲಿ ಮಲಗಿದಾಗ ಭೂಗರ್ಭದಿಂದ ಪುಟ್ಟಿದೆದ್ದ ನೀರಿನ ಕಾರಂಜಿಯನ್ನೂ ಸಹ ಕಾಣಬಹುದಾಗಿದೆ.

ವಿಷ್ಣುಪುರದ ಮಂದಿರಗಳೆಲ್ಲ ಶುದ್ಧ ವೈಷ್ಣವ ಸಂಪ್ರದಾಯದ ಪ್ರತೀಕಗಳಾಗಿವೆ. ಮಲ್ಲವಂಶದ ಅರಸರು ಶ್ರೀನಿವಾಸಾಚಾರ್ಯರಿಂದ ವೈಷ್ಣವ ದೀಕ್ಷೆಯನ್ನು ಪಡೆದವರು. ಇಲ್ಲಿಯ ದೇವಮಂದಿರಗಳಲ್ಲಿ ಚೈತನ್ಯ ಮಹಾಪ್ರಭುಗಳ ಕೆಲವು ಭಂಗಿಗಳನ್ನೂ ಬಿಡಿಸಲಾಗಿದೆ. ಮೃತ್ತಿಕೆಯಲ್ಲಿ ವಿಗ್ರಹಗಳನ್ನು ಬಿಡಿಸುವ ಕಲಾಕೌಶಲ್ಯದ ಅಭ್ಯಾಸಕ್ಕೆ ವಿಷ್ಣುಪುರವು ಹೇಳಿ ಮಾಡಿಸಿದ ಸ್ಥಳವೆನಿಸಿದೆ. ಮದನಮೋಹನ ಅಥವಾ ಶ್ರೀಕೃಷ್ಣ ದೇವಮಂದಿರದಲ್ಲಿ ಬಿಡಿಸಲಾದ ಅಂತರಾಳದ ಕೃತಿಗಳೆಲ್ಲ ಬಂಗಾಲದ ವಿಶಿಷ್ಟ ಸಂಪ್ರದಾಯಗಳಿಗೆ ಮಾದರಿಯಾಗಿವೆ. 1694 ರಲ್ಲಿ ರಾಜಾ ಸಿಂಹದೇವನ ಕಾಲದಲ್ಲಿ ಈ ದೇವಾಲಯದ ಕಾರ್ಯವು ಸಂಪೂರ್ಣಗೊಂಡಿತೆಂಬ ಬಗ್ಗೆ ಆಧಾರಗಳು ಸಿಗುತ್ತವೆ ಮಹಾಭಾರತದ ಅನೇಕ ಘಟನೆಗಳನ್ನು ಈ ದೇವಾಲಯದಲ್ಲಿ ವಿಗ್ರಹರೂಪದಲ್ಲಿ ಬಿಡಿಸಲಾಗಿದೆ. ಇದೇ ರೀತಿ ಇನ್ನೊಂದು ದೇವಾಲಯವು ರಾಧೇಶ್ಯಾಮನದಾಗಿದೆ. ಕೊನೆಯ ಮಲ್ಲದೊರೆ ಚೈತನ್ಯಸಿಂಹನಿಂದ ಈ ದೇವಾಲಯವು ನಿರ್ಮಾಣಗೊಂಡಿತೆಯಂದು ತಿಳಿದು ಬರುತ್ತದೆ. ರಾಧಾಲಾಲ ಮಂದಿರವಂತೂ ಪ್ರೇಕ್ಷಕರ ಕಣ್ಮನಗಳನ್ನು ಸೂರೆಗೊಳ್ಳುತ್ತದೆ. ಕೆಲವು ದೇವಮಂದಿರಗಳನ್ನು ಗ್ರಾಮಾಂತರದಲ್ಲಿಯ ಗುಡಿಸಿಲುಗಳಂತೆ ನಿರ್ಮಿಸಲಾಗಿದೆ. ಅಲ್ಲಲ್ಲಿ ಮಲ್ಲ ವಂಶದ ರಾಜರ ವಿಗ್ರಹಗಳನ್ನೂ ಸಹ ಬಹು ಸುಂದರವಾಗಿ ಬಿಡಿಸಿದ್ದಾರೆ.

ದೇವಾಲಯಗಳ ಪ್ರಾಂಗಣದಲ್ಲಿ ವಿಶಾಲವಾದ ಏಳು ನೀರಿನ ಕೊಳಗಳಿದ್ದು, ಶ್ಯಾಮವರ್ಣದಿಂದ ಕೂಡಿದ ಆ ಜಲವನ್ನೇ ಅಂದಿನ ರಾಜಧಾನಿಯ ಪ್ರತಿಯೊಂದು ಭಾಗದಲ್ಲಿ ಪ್ರಜೆಗಳು ಬಳಸುತ್ತಿದ್ದರಂತೆ. ಮಲ್ಲ ವಂಶದಲ್ಲಿಯೇ ಮಹಾವೀರನೆಂದೆನಿಸಿಕೊಂಡಿದ್ದ ರಾಜಾ ಹಮ್ಮಿರನಿಂದ ಇ.ಸ 1600 ರಲ್ಲಿ ರಾಸಮಂಚವೆಂಬ ಗೃಹವು ನಿರ್ಮಿಸಲ್ಪಟ್ಟಿತು ವಿಶಾಲವಾದ ಪ್ರಾಕಾರದಲ್ಲಿ ರಾಧಾಕೃಷ್ಣರ ರಾಸಲೀಲೆಗಳ ಅನೇಕ ವಿಗ್ರಹಗಳನ್ನು ಬಿಡಿಸಲಾಗಿರುವುದು. ಸಂಗೀತ ನೃತ್ಯಗಳಿಗಾಗಿ ರಾಜಾ ಹಮ್ಮಿರನು ಈ ಕಟ್ಟಡ ಕಟ್ಟಿಸಿದನೆಂದು ಹೇಳುತ್ತಾರೆ.

ಮೊಗಲ ಬಾದಶಹ ಔರಂಗಜೇಬನು ತನ್ನ ಆಡಳಿತಾವಧಿಯಲ್ಲಿ ಪರಂಪರಾಗತವಾಗಿ ನಡೆ



ದುಕೊಂಡು ಬಂದಿದ್ದ ದರ್ಬಾರಿನ ಸಂಗೀತಗಾರರು, ನೃತ್ಯಕಲಾವಿದರನ್ನೆಲ್ಲ ಕೆಲಸದಿಂದ ತೆಗೆದು ಹಾಕಿದಾಗ, ರಾಜಾಶ್ರಯವಿಲ್ಲದ ಆ ಕಲಾವಿದರೆಲ್ಲ ವಿಷ್ಣುಪುರವನ್ನು ಹುಡುಕಿಕೊಂಡು ಬರುವಂತಾಯಿತು ತಾನಸೇನನ ವಂಶಜನಾದ ಬಹದ್ದೂರಖಾನನು ಇಲ್ಲಿಯ ರಘುನಾಥಸಿಂಹನ ಆಶ್ರಯದಲ್ಲಿದ್ದನು ಪ್ರಸಿದ್ಧ ಮೃದಂಗವಾದಕ ಪೀರಭಕ್ಷನೂ ಸಹ ವಿಷ್ಣುಪುರದ ರಾಜರ ಆಶ್ರಯವನ್ನು ಹೊಂದಿದನು ಘನವಿದ್ವಾಂಸರೆನಿಸಿದ ರಾಮಶಂಕರ ಭಟ್ಟಾಚಾರ್ಯ, ಗದಾಧರ ಚಕ್ರವರ್ತಿ ಮೊದಲಾದವರಿಗೆಲ್ಲ ವಿಷ್ಣುಪುರವೇ ಆಶ್ರಯಸ್ಥಾನವೆನಿಸಿತು ಅಂದಿನ ಕಾಲದಲ್ಲಿ ಅತ್ಯಂತ ಸುಂದರಿ ಹಾಗೂ ಪ್ರಸಿದ್ಧ ನರ್ತಕಿ ಎಂದೆನಿಸಿದ ಲಾಲಬಾಯಿ ಎಂಬುವವಳು ರಾಜಾ ರಘುನಾಥಸಿಂಹನ ಆಶ್ರಯದಲ್ಲಿದ್ದಳು ರಘುನಾಥಸಿಂಹನಿಂದ ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ತನ್ನ ಮಗನಿಗೆ ರಾಜ್ಯಾಧಿಕಾರವುಲಭಿಸಬೇಕೆಂಬ ದುರ್ಬುದ್ಧಿಯಿಂದ ತನಗೆ ಆಶ್ರಯದಾತನೆನಿಸಿದ್ದ ರಘುನಾಥಸಿಂಹನಿಗೇ ವಿಷ ಹಾಕಿಕೊಂದಳು

ವಿಷ್ಣುಪುರದ ಕೋಟೆಯ ಪ್ರತಿಯೊಂದು ಬುರುಜುಗಳ ಮೇಲೆ ಸಣ್ಣ ಸಣ್ಣ ತೋಪುಗಳಿರುವವು. ಅವುಗಳಲ್ಲಿ ಎರಡನ್ನು ಇಂದಿಗೂ ದುರ್ಗಾಪೂಜೆಯ ಕಾಲದಲ್ಲಿ ಬಳಸುವುದುಂಟು ವಿಷ್ಣುಪುರದಲ್ಲಿ ನಿರ್ಮಿತವಾದ ಸೀರೆಗಳಿಗೆ ಬಹು ಬೇಡಿಕೆಗಳಿವೆ ಮುರ್ಷಿದಬಾದ ಸಮೀಪದಲ್ಲಿ ಇಂದಿಗೂ ಅನೇಕ ಕುಶಲಕರ್ಮಿಗಳಿದ್ದಾರೆ ಮೃಣ್ಮಯ ವಿಗ್ರಹ, ಪಂಚಲೋಹದ ವಿಗ್ರಹ, ಚಿತ್ರವಿಚಿತ್ರವಾದ ಶೈಲಿಯಲ್ಲಿ ರಚಿತವಾದ ಶಿಲೆಗಳನ್ನು ರಚಿಸುವುದರಲ್ಲಿ ಅವರು ಸಿದ್ಧಹಸ್ತರೆನಿಸಿದ್ದಾರೆ ಅಸನಸೋಲದಿಂದ ರೈಲು ಮಾರ್ಗವಾಗಿ ಚಕ್ರಧರಪುರದಿಂದ ಪುರುಲಿಯಾ ಎಕ್ಸ್‌ಪ್ರೆಸ್ ಮುಖಾಂತರ ವಿಷ್ಣುಪುರಕ್ಕೆ ಹೋಗಬಹುದು ಪಶ್ಚಿಮ ಬಂಗಾಲದ ಪ್ರವಾಸೋದ್ಯಮ ಇಲಾಖೆಯವರಿಂದಲೂ ಪ್ರವಾಸಿಗರಿಗಾಗಿ ಅನೇಕ ಸೌಕರ್ಯಗಳು ಲಭಿಸುವವು. ●



ಸಪ್ತಬದರಿ, ನವತಿರುಪತಿ, ಪಂಚರಂಗನಾಥ- ಮುಂತಾಗಿ ದಿವ್ಯಕ್ಷೇತ್ರಗಳು ಸಾಮೂಹಿಕವಾಗಿಯೂ ಸಾಂಖಿಕವಾಗಿಯೂ ಪ್ರಸಿದ್ಧಿಹೊಂದಿವೆ. ಈ ಬಣದಲ್ಲಿ ಪಂಚಕೃಷ್ಣಕ್ಷೇತ್ರಗಳೂ ಸೇರಿವೆ ಇವುಗಳ ಪೈಕಿ ತಂಜಾವೂರ್ ಜಿಲ್ಲೆಯಲ್ಲಿರುವ ತಿರುಕ್ಕಣ್ಣಪುರವೂ ಒಂದು ಅಷ್ಟಾಕ್ಷರಿ ಮಂತ್ರ ಸಿದ್ಧಿಕ್ಷೇತ್ರವೆಂದು ತಿರುಮಂಗೈ ಆಳ್ವಾರರ ಕಾಲದಿಂದಲೂ ಪ್ರಸಿದ್ಧಿಯಾಗಿ ಬಂದಿದೆ "ಶ್ರೀರಂಗ ವೆಂಕಟಾದ್ರಿ ಶ್ರೀಮುಷ್ಣಂ,ಸಾಲಗ್ರಾಮ, ಪುಷ್ಕರ, ನೈಮಿಷಾರಣ್ಯ, ತೋತಾದ್ರಿ, ನರನಾರಾಯಣಾಶ್ರಮ - ಈ ಅಷ್ಟಕ್ಷೇತ್ರಗಳಲ್ಲಿ ನಾನು ನಿತ್ಯವಾಸ ಮಾಡುತ್ತಿದ್ದೇನೆ ಅಷ್ಟಾಕ್ಷರಿಯ ಒಂದೊಂದು ಅಕ್ಷರವು ಈ ಎಂಟು ಕ್ಷೇತ್ರಗಳಲ್ಲಿ ತಲಾ ಒಂದೊಂದಂತೆ ಪ್ರತಿನಿಧಿಸಿವೆ. ಕೃಷ್ಣಪುರಕ್ಷೇತ್ರದಲ್ಲಿ ನಾನು ಪೂರ್ತಿ ಅಷ್ಟಾಕ್ಷರ ಶರೀರಿಯಾಗಿ ಸಂಭವಿಸಿದ್ದೇನೆ" ಎಂದು ಭಗವಂತನು ಗರುಡನಿಗೆ ಕ್ಷೇತ್ರದ ಮಹಿಮೆಯನ್ನು ಹೇಳುವನು.

ನೈಮಿತಂ ಚೇತಿ ಮೇ
ಸ್ಥಾನಾನ್ಯ ಸೌ ಮುಕ್ತಿ ಪ್ರಧಾನಿವೈ
ಯತುಶ್ಚಾಷ್ಟಾಕ್ಷರೈಕಕ
ವರ್ಣಮೂರ್ತಿಃ ವಸಾಮ್ಯಹಂ
ತಿಷ್ಟಾಮಿ ಕೃಷ್ಣಕ್ಷೇತ್ರೇ
ಪುಣ್ಯಾ ಸಪ್ತಕೋಗತ
ಅಷ್ಟಾಕ್ಷರಸ್ಯ ಮಂತ್ರಸ್ಯ
ಸರ್ವಾಕ್ಷರ ಮಯ ಸದಾ

ಈ ಕ್ಷೇತ್ರವನ್ನು ಸಪ್ತಪುಣ್ಯಾಸ್ತ ಎಂದೂ ಕರೆಯುವರು. ಈ ಸಪ್ತಪುಣ್ಯಗಳು ಯಾವುವು ಎಂಬುದನ್ನು ಪದ್ಮಪುರಾಣ ವಿವರಿಸುವುದು-

೧ ಭಗವನ್ನಾರಾಯಣನು ಕ್ಷೀರಾಬ್ಧಿಯನ್ನು ತೊರೆದು ಕೃಷ್ಣನಾಗಿ ಅರಣ್ಯಗಳ ಮಧ್ಯೆ ಇಲ್ಲಿ ಸಂಭವಿಸಿರುವುದರಿಂದ ಇದು ಕೃಷ್ಣಕ್ಷೇತ್ರ. ಮಾಲ್ಕೈ ದಶಕದಲ್ಲಿ (9-10) ನಮ್ಮಾಳ್ವಾರರು ಸ್ಪಷ್ಟಪಡಿಸುವರು- 'ಆಶ್ರಿತ ರಕ್ಷಣೆಗಾಗಿ ಇದು ತಕ್ಕಸ್ಥಳ ಎಂದು ತಾನೇ ಬಯಸಿ ಬಂದಿರುತ್ತಾನೆ - ತಾನ್ ನಯನ್ದಪೆರುಮಾನ್ ಪರಮೇಟ್ಟಿತನ್

೨ ಹೀಗೆ ಸಂಕಲ್ಪಿಸಿದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಅನೇಕ ಋಷಿಗಳು ಅರಣ್ಯದ ಮಧ್ಯದಲ್ಲಿ ಸಹಸ್ರಾರು ವರ್ಷಗಳು ತಪಸ್ಸು ಮಾಡಿರುವುದರಿಂದ ಇದು ಕೃಷ್ಣಾರಣ್ಯ, ಕಲಿಯನ್

# ತಿರುಕಣ್ಣಪುರ

- ಪ್ರೊ|| ಸಿ. ಗೋವಿಂದಾಚಾರ್.

ಉಲ್ಲೇಖಿಸುವರು - ಕಾವಳರುಕಡಿ ಪೊಳಿಲ್ ಶೂಳ್ (ಪೆತಿ - 8 - 1 - 9)

೩. ಭಾಗವತರು ಕೈಂಕರ್ಯಪರರಾಗಿ ಉಜ್ಜೀವಿಸುವ ಕ್ಷೇತ್ರವಿದು ಅಂದರೆ ಭಾಗವತ ಸಮೃದ್ಧಿಯುಳ್ಳ ಕ್ಷೇತ್ರ - ತೊಂಡೀರ್ ಉಯ್ಯುಂವಹ್ಯೆ (ಪೆತಿ 8-6-1) ತೊಂಡರೇ ತೊಳುದೆಳುಮಿನೊ (ತಿರುವಾಯ್‌ಮೊಳಿ 9 - 10 - 2)

೪ ಉತ್ಪಲಾವತಕ ವಿಮಾನದಡಿಯಲ್ಲಿ ಭಗವಂತನು ನಿಂತ ಭಂಗಿಯಲ್ಲಿದ್ದಾನೆ

೫ ನಿತ್ಯ ಪುಷ್ಕರಿಣಿ

೬ ಕಾವೇರಿ ಮತ್ತು ಇದರ ಉಪನದಿಯಾದ ಮುದಿಕೊಂಡನ್ ದಡದಲ್ಲಿದೆ ಕ್ಷೇತ್ರ.

೭ ಸಮೀಪದಲ್ಲೇ ಸಮುದ್ರ (ಬಂಗಾಳ ಕೊಲ್ಲಿ) ತೀರವಿದೆ 'ವೇಲೈ ಮೋದುಮ್ ಮದಿಳ್ ಶೂಳ್ ತಿರುಕ್ಕಣ್ಣಪುರತ್ತು' (ತಿರುವಾಯ್‌ಮೊಳಿ) ನದಿಗಳ ಸಂಗಮದಿಂದ ಕ್ಷೇತ್ರಕ್ಕೆ ದ್ವೀಪದ ಸೊಬಗುಂಟಾಗಿದ ತುಂಬಾ ಪ್ರಾಚೀನವಾದ್ದರಿಂದ '75 ಚತುರ್ಯುಗಕ್ಷೇತ್ರ' ಎಂದು ಹೆಸರಿದೆ ಕೀಳ್ಕೈವೀಡು ಎಂದೂ ಕರೆಯುವರು ಮೂಲಮೂರ್ತಿ ನೀಲಮೇಘ ಪೆರುಮಾಳ್ ಪ್ರಯೋಗ ಚಕ್ರ ಹಿಡಿದಿರುವುದು ಕ್ಷೇತ್ರದ ಪ್ರಾಚೀನತೆಗೆ ಪುಷ್ಟಿಕೊಟ್ಟಿದೆ ಈ ದಿವ್ಯ ಮಂಗಳ ವಿಗ್ರಹವನ್ನು 'ಜಗನ್ಮೋಹನಂ' ಎಂದು ಕರೆಯುವರು 'ಶೌರಿರಾಜಮಹಂ ವಂದೇ ಸರ್ವಾಂಗ ಸುಂದರಂ' ಎಂದು ಸುಪ್ರಭಾತದಲ್ಲಿವೆ ಈ ಸೌಂದರ್ಯವನ್ನು ಕಲಿಯನ್ ಎರಡುಬಾರಿ ಉಲ್ಲೇಖಿಸುವರು

ಎ) ನೀರುಂಡಮೇಘವನ್ನು ಹೋಲುವ ದಿವ್ಯ ಮಂಗಳ ವಿಗ್ರಹವನ್ನುಳ್ಳ ಸ್ವಾಮಿ ಇರುವ ದಿವ್ಯದೇಶವಿದು - ಮಯ್ಯೆ ಮುಹಿಲ್ ತರುವಿಯ ಉರವಿನನ್ (ಪೆ ತಿ 8 - 7 - 6)

ಬಿ) ಮಗಳ ಅನುಭವವನ್ನು ತಾಯಿ ಹೇಳಿದಂತೆ - 'ಮಹಾನುಭಾವ ಮಹಾನುಭಾವ' - ಪೇರಾಳನ್ ಪೇರಾಳನ್ (ಪೆ ತಿ 8 - 1, 1 to 10)

ಭಗವಂತನೇ ಇಲ್ಲಿ ಕೃಷ್ಣನಾಗಿ ಸಂಭವಿಸಿರುವ ಲೀಲೆಯನ್ನು ಅರಿತು ನೈಮಿಷಾರಣ್ಯದಿಂದ ದಂಡಕ ಮುಂತಾದ ಮುನಿಗಳು ಇಲ್ಲಿಗೆ ಧಾವಿಸಿದರು ಆದರೆ ವಿಕಟಾಕ್ಷಣ ಎಂಬ ಅಸುರನು ಇವರ ತಪಸ್ಸಿಗೆ ಅಡ್ಡಿಯುಂಟುಮಾಡುತ್ತಿದ್ದ ಮುನಿಯ ಪ್ರಾರ್ಥನೆಯಂತೆ ಕೃಷ್ಣನು ಅಶ್ವಾರೂ



ಥನಾಗಿ ಬಂದು ಸುದರ್ಶನ ಚಕ್ರವನ್ನು ಪ್ರಯೋಗಿಸಿ ಅಸುರನನ್ನು ಸಂಹರಿಸಿದ. ಅಂದಿನಿಂದ ಅದೇ ಪ್ರಯೋಗ ಚಕ್ರವು ನಿರಂತರವಾಗಿ ಭಗವಂತನ ಹಸ್ತದಲ್ಲಿದೆ. ರಕ್ಷಣೆಗಾಗಿ ಕ್ಷಿಪ್ರವಾಗಿ ಬಂದೊದಗಿದ ಪ್ರಯೋಗ ಚಕ್ರವು ಒಂದು ತತ್ವವೇ ಆಗಿದೆ ದಂಡಕಮುನಿಯ ವಿಗ್ರಹ ಮೂಲವರ ಸನ್ನಿಧಿಯಲ್ಲಿದೆ.

ಉತ್ಸವರ್ ಶೌರಿರಾಜ ಪೆರುಮಾಳ್‌ಗೆ ಶ್ರೀ, ಭೂ, ಆಂಡಾಳ್ ಮತ್ತು ಪದ್ಮಿನಿ ಎಂದು ನಾಲ್ಕು ಪತ್ನಿಯರಿರುತ್ತಾರೆ. ಕೃಷ್ಣಪುರನಾಯಕಿ, ಕಣ್ಣಪುರೀಶ್ವರಿ ಎಂದು ತಾಯಾರಿಗೆ ಹೆಸರುಗಳಿವೆ ಸ್ಥಳ ಪುರಾಣ ಹೇಳುವುದು.

ಪುಣ್ಯೇ ಕಣ್ಣಪುರೋತ್ತಮೇ
ವಿಲಸಿತ ಶ್ರೀ ಶೌರಿರಾಜಪ್ರಭುಃ
ದೇವಿ ತತ್ಪುರನಾಯಕೀ
ಕಮಲಿನೀ ನಿತ್ಯಾಭಿದಾ ಸರ್ವದಾ
ದಿವ್ಯೇ ಚೈವ ತದುತ್ಪಲಾವತ
ಸಮಾಖ್ಯಾ ತೇ ವಿಮಾನಾದ್ಭುತೇ
ತಿಷ್ಟನ್ ಪೂರ್ವದಿಶಾವಲೋಕನ
ಮುಖ್ಯ ಕಣ್ವಸ್ಯ ಮುಕ್ತಿಪ್ರದಃ

ಅರ್ಚೆಯಲ್ಲಿ ಪವಾಡ - I - ಶೌರಿರಾಜ ಎಂದು ಹೆಸರು ಹೇಗಾಯಿತು? ಪ್ರಾರಬ್ಧಕರ್ಮವೋ ಏನೋ ಪ್ರಧಾನ ಅರ್ಚಕ ಶ್ರೀಧರಭಟ್ಟರು ದೇವದಾಸಿಯೊಬ್ಬಳ ಆಕರ್ಷಣೆಗೆ ಒಳಗಾದರು. ಪೂಜೆಯಾದನಂತರ ಪುಷ್ಪ ಪ್ರಸಾದಗಳನ್ನು ಅವಳಿಗೆ ಕೊಡುತ್ತಿದ್ದರು. ಒಂದು ಸಂಜೆ ಗುಡಿ ಮುಚ್ಚುವ ಸಮಯಕ್ಕೆ ಚೋಳರಾಜನು ಬರುತ್ತಿರುವನೆಂಬ ವಿಷಯವು ಭಟ್ಟರಿಗೆ ತಿಳಿದು ಸ್ವಲ್ಪ ಭಯ ಉಂಟಾಯಿತು. ದಾಸಿಗೆ ಕೊಟ್ಟ ಪುಷ್ಪವನ್ನು ತಕ್ಷಣವೇ ಮರಳಿ ತಂದರು. ರಾಜನು ಎಂದಿನಂತೆ ದರ್ಶನಮಾಡಿ ಕೊಟ್ಟ ಪುಷ್ಪವನ್ನು ಕಣ್ಣಿಗೆ ಒತ್ತಿಕೊಳ್ಳಲು ಅದರಲ್ಲಿ ಉದ್ದನೆಯ ಕೂದಲು ಕಾಣಿಸಿತು. ಕೋಪದಿಂದ ಪ್ರಶ್ನಿಸಿದಾಗ 'ಇದು ದೇವರ ಶಿರಸ್ಸಿನಿಂದಲೇ ಬಂದಿದೆ' ಎಂದು ಭಟ್ಟರು ಉತ್ತರಕೊಟ್ಟರು ರಾಜನು ಸಂಶಯಪಟ್ಟು 'ಸರಿ ನಾಳೆ ಬರುವೆನು, ಕೂದಲು ಇರದಿದ್ದಲ್ಲಿ ನಿನ್ನ ಕೈಗಳನ್ನು ಕತ್ತರಿಸಬೇಕಾಗುವುದು' ಎಂದು ಎಚ್ಚರಿಸಿದ. ಆ ರಾತ್ರಿ ಭಟ್ಟರಿಗೆ ನಿದ್ದೆ ಬಾರದೆ ಭಗವನ್ನಾಮಸ್ಮರಣೆಯಲ್ಲೇ ಕಳೆದರು. ಬೆಳಗಾಯಿತು. ರಾಜನು ಗುಡಿಗೆ ಬಂದು 'ಎಲ್ಲಿ ದೇವರ ಕೇಶ' ಎಂದು ಆಗ್ರಹಪಡಿಸಿದ. ಭಟ್ಟರು ಮೂರ್ತಿಯ ಕತ್ತಿಗೆ ಕೈಹಾಕಿ ಕೂದಲನ್ನು ಎಳೆಯುವಂತೆ ನಟಿಸಿದರು. ಮನಸೆಲ್ಲಾ ಭಗವಧ್ಯಾನದಲ್ಲೇ ನೆಟ್ಟಿತ್ತು ಆಶ್ಚರ್ಯ! ಕೈಗೆ ಕೂದಲು ಬಂದಿದ್ದಲ್ಲದೆ ಅದರಲ್ಲಿ ಬಂದ ರಕ್ತದ ತೊಟ್ಟು ರಾಜನ ಮೇಲೆ ಚಿಮ್ಮಿತು ರಾಜನು ಆಶ್ಚರ್ಯಗೊಂಡು ಭಟ್ಟರಲ್ಲಿ ಕ್ಷಮೆ ಬೇಡಿದ ಭಗವಂತನು ಅರ್ಚೆಯಲ್ಲೂ ಆಪತ್ಬಾಂಧವನಾಗಿ ಬಂದು ಕಾಪಾಡಿದ್ದ ಭಟ್ಟರು ಮನಸಾರೆ ಕೊಂಡಾಡಿ ಸರ್ವವಸ್ವವನ್ನೂ ಅವನಿಗೆ ಸಮರ್ಪಿಸಿದರು ಅಂದಿನಿಂದ ಶೌರಿರಾಜ, ಕೂಂದಲ್ ಪೆರುಮಾಳ್ ಎಂದು ಹೆಸರಾಯಿತು ವಿಷ್ಣು ಸಹಸ್ರನಾಮದಲ್ಲಿ ಬರುವ 'ಶೌರಿ' ಎಂಬ ಪದವು ಈ ದೇವರಿಗೆ ಸಲ್ಲುವುದು ಎಂದು ಪರಾಶರಭಟ್ಟರು ವ್ಯಾಖ್ಯಾನಿಸಿರುತ್ತಾರೆ

II ಉತ್ಸವರ ಬಲ ಹುಬ್ಬಿನ ಮೇಲೆ ಗಾಯದ ಗುರುತಿದೆ ಒಮ್ಮೆ ಅರ್ಕೈಯರೊಬ್ಬರು ಆ ಕಾಲದಲ್ಲಿ ಆಳುತಿದ್ದ ದುಷ್ಟರಾಜನೊಬ್ಬನನ್ನು ಶೌರಿರಾಜನು ಶಿಕ್ಷಿಸಲಿಲ್ಲವೆಂಬ ಕಾರಣದಿಂದ ಕೋಪಗೊಂಡು ಕೈಯಲ್ಲಿದ್ದ ಕುಳಿತಾಳವನ್ನು ದೇವರೆಡೆಗೆ ಎಸೆದು 'ನಿನ್ನ ಸುದರ್ಶನವಿದ್ದು ಏನು ಪ್ರಯೋಜನ ? ದುಷ್ಟ ಶಿಕ್ಷಕ ತತ್ವವನ್ನೇ ಮರೆತಂತಿದೆಯಲ್ಲಾ' ಎಂದು ಆಗ್ರಹಪಡಿಸಿದರು ಇವರ ಇಂಗಿತವನ್ನರಿತ ಶೌರಿರಾಜನು ದುಷ್ಟನಿಗೆ ಗುಣವಾಗದ ವ್ಯಾಧಿಯನ್ನು ಸಂಕಲ್ಪಿಸುವುದರ ಮೂಲಕ ಸಂಹರಿಸಿದನು.

ಗರ್ವದಿಂದ ಗರುಡನು ಭಗವದಪಚಾರಪಟ್ಟು, ಅದರ ಪರಿಹಾರಕ್ಕಾಗಿ ಈ ಪುಣ್ಯಸ್ಥಳದಲ್ಲಿ ತಪಸ್ಸು ಮಾಡಿ ಕೃಪೆ ಪಡೆದನು ಈ ಸ್ಥಳವೇ ಗರುಡಪರ್ವತ, ಸಮುದ್ರದ ಪಾಲಾಯಿತು

ಉಪರಿಚರವಸು ಎಂಬ ರಾಜನು ಈ ದೇವಸ್ಥಾನವನ್ನು ಕಟ್ಟಿಸಿದ ಎಂದು ಇಲ್ಲಿಯ ಶಾಸನಗಳು ತಿಳಿಸುವುವು. ಇವನು ಇಂದ್ರನ ಆಪ್ತಸ್ನೇಹಿತನಾಗಿದ್ದ ಯುದ್ಧಗಳಲ್ಲಿ ನೆರವಾದದ್ದರಿಂದ ಕೃತಜ್ಞತೆಗಾಗಿ ಇಂದ್ರನು ಇವನಿಗೆ ಅಂತರಿಕ್ಷದಲ್ಲಿ ಯಾವಾಗ ಎಲ್ಲಿಗೆ ಬೇಕಾದರೂ ಚಲಿಸಲು ಒಂದು ರಥವನ್ನು ಬಳುವಳಿಯಾಗಿ ಕೊಟ್ಟ. ಹೀಗೆ ಸಂಚರಿಸುವಾಗ ಒಮ್ಮೆ ವಸುವು ಇಂದು ಕ್ಷೇತ್ರ ಇರುವಸ್ಥಳವನ್ನು ನೋಡಿ ಹಸಿವು ಬಾಯಾರಿಕೆಗಳನ್ನು ಹೋಗಲಾಡಿಸಿಕೊಳ್ಳಲು ಸೊಗಸಾದ ಬತ್ತದ ಗದ್ದೆಯ ಮಧ್ಯೆ ಇಳಿದ. ಗದ್ದೆಯನ್ನು ಒಬ್ಬ ಬಾಲಕನು ಕಾಯುತ್ತಿದ್ದ 'ಇಲ್ಲೇಕೆ ಬಂದೆ' ಎಂದು ಬಾಲಕನು ಪ್ರಶ್ನಿಸಿದ ಕೋಪಗೊಂಡ ರಾಜನು ಬಾಣಪ್ರಯೋಗ ಮಾಡಲು ಅದು ವಿಫಲವಾಯಿತು ಹುಡುಗ ಸಾಮಾನ್ಯನಲ್ಲ ಎಂದು ಮನಸಿನಲ್ಲೇ ಅಂದುಕೊಂಡು ರಾಜನು ಅವನನ್ನೇ ನೋಡುತ್ತಿದ್ದ ಅಲ್ಲೇ ಇರುವ ಕೊಳ (ನಿತ್ಯ ಪುಷ್ಕರಿಣಿ) ದಲ್ಲಿ ಸ್ನಾನಮಾಡಿ ಬರಲು ಬಾಲಕನು ಹೇಳಿದಾಗ ವಸುವಿಗೆ ದೈವಸಾನ್ನಿಧ್ಯದ ನೆನಪು ಬಂತು. ರಾಜನು ಬಾಲಕನು ಹೇಳಿದ ಹಾಗೆ ಮಾಡಿ ಹಿಂದಿರುಗಿ ಬಂದು ನೋಡಿದಾಗ ಭಗವಂತನು ನಿಜರೂಪದಲ್ಲಿ ಪ್ರಸನ್ನನಾಗಿದ್ದ. ಭತ್ತದ ತೆನೆಗಳೆಲ್ಲಾ ಋಷಿಗಳಾಗಿದ್ದುವು. ಭಗವಂತನ ಸಂಕಲ್ಪದಂತೆಯೇ ವಸುರಾಜನು ದೇವಸ್ಥಾನವನ್ನು ಒಂದು ನಗರವನ್ನೇ ನಿರ್ಮಿಸಿದನು ತನ್ನ ಮಗಳನ್ನು ವಿವಾಹವಾಗಲು ವಸುವು ಪ್ರಾರ್ಥಿಸಲು ಭಗವಂತನು ಕೃಪೆ ಮಾಡಿದ ಇವಳೇ ಪದ್ಮಿನಿ. ವಸುರಾಜನು ಭಗವಂತನಿಗೆ ಮಾವ ಆದನು ಭಗವಂತನಿಂದ ರಾಜನಿಗೆ ಅಷ್ಟಾಕ್ಷರಿ ಮಂತ್ರವೂ ಉಪದೇಶವಾಯಿತು

ಹಸಿರುಗದ್ದೆ, ಕ್ಷೇತ್ರ ಹಾಗೂ ನಗರ ನಿರ್ಮಾಣಗಳ ಬಗ್ಗೆ ಆಳ್ವಾರರ ಸೂಕ್ತಿಗಳಲ್ಲಿ ಉಲ್ಲೇಖಗಳಿವೆ. ಪೆರಿಯ ತಿರುಮೊಳಿ 8-3-1 ರಿಂದ 10 ರ ವರೆಗೂ ಪರಿಸರ ವರ್ಣನೆಯಲ್ಲಿ ಗದ್ದೆಗಳ ಪ್ರಸ್ತಾವನೆ ಇದೆ -

ಎ) ನಾಟಿಹಾಕಿರುವ ವಿಶಾಲವಾದ ಗದ್ದೆಗಳಿಂದ ಕೂಡಿದ ಕ್ಷೇತ್ರ - ಮಡಿಪ್ಪುಲ್‌ಹು ನೆಡುವಯಲ್ / ಅಯಲ್ ವಯಲ್.

ಬಿ) ಉದ್ಯಾನವನಗಳಿಂದ ಸಮೃದ್ಧವಾಗಿರುವ ಕ್ಷೇತ್ರ - ಪೊಳಿಲ್‌ಶೂಳ್‌ಶೆಯಿಲ್ (ತಿರುವಾಯ್‌ಮೊಳಿ 'ಮಾಲೈ' ದಶಕ)

ಸಿ) ಆಂಡಾಳ್ 'ಕಣ್ಣಪುರನಹುರ್ ಎಂದು ಹೇಳಿರುತ್ತಾಳೆ (ನಾಚ್ಚಿಯಾರ್ ತಿರುಮೊಳಿ)

ಡಿ) ಕಲ್ಲಿಲ್ ವಾಯ್‌ಸ್ಥಮದಿಳ್ ಶೂಳ್ (ಪೆ ತಿ. 8-1-10) ನೆಡುಂ ಮರುಹಿಲ್ (8-3-4)

ಇ) 'ಭಕ್ತರ ಅಭೀಷ್ಟವನ್ನು ಈಡೇರಿಸಲು ಇಲ್ಲಿ ಸಂಭವಿಸಿ ಸ್ನೇಹಿತನಂತಿರುವನಲ್ಲಾ ಇದೆಂಥಾ ಸೌಲಭ್ಯ ಇವನದು' ಎಂದು ಮಾರನ್ ಋಷಿಗಳ ಬಗ್ಗೆ ಭಗವಂತನ ಕೃಪೆಯನ್ನು ವರ್ಣಿಸಿರುತ್ತಾರೆ - 'ತನಮೇಯರ್ಕು ಅಸ್ಸನ್'

ವಸುರಾಜನು ಒಟ್ಟು ೫ ಪ್ರಾಕಾರಗಳನ್ನು ಕಟ್ಟಿಸಿದ್ದ. ಇದರಲ್ಲಿ ಮೂರು ಮಾತ್ರ ಅಸ್ತಿತ್ವದಲ್ಲಿದೆ. ಪ್ರಾಕಾರಗಳು ತುಂಬ ಎತ್ತರವಾಗಿರುವುದರಿಂದ ವಿಮಾನವು ಕಾಣುವುದಿಲ್ಲ 'ಉತ್ಪಲಾವತ' ಎಂದರೆ ಅಗೋಚರ ಎಂದೂ ಅರ್ಥವಿದೆ ಎಂದೂ ಹೇಳುವರು.

ಉತ್ಸವ ಪೀಠದಲ್ಲಿ ಶೌರಿರಾಜ, ನಾಲ್ಕುದೇವಿಯರು, ಬಲಿದೇರ, ಯಾಗದೇರ ಮತ್ತು ನವನೀತಮೂರ್ತಿಗಳಿವೆ. ಶೌರಿರಾಜನ ಬಲಹಸ್ತ ಸ್ವೀಕರಿಸುವ ಭಂಗಿಯಲ್ಲಿದೆ. ಬಲಿಯು ದಾನಕೊಡುವಾಗ ಧಾರೆ ಎರೆಯುವುದನ್ನು ಇಲ್ಲಿ ಸಮೀಕರಿಸುವರು. 'ಕಣ್ಣಪುರನಹರ್ ವಾತಮಿಸ್ರಿ ಮಹಿಳ್ನ್ದುರೈವಾಮನನ್' ಎಂದು ಆಂಡಾಳ್ ಹಾಡಿದ್ದಾಳೆ. ಗರುಡ ಮತ್ತು ದಂಡಕ ಋಷಿಯ ಮೂರ್ತಿಗಳು ತುಂಬಾ ಸೊಗಸಾಗಿವೆ. ರಾಜಬೀದಿಗೆ ದಕ್ಷಿಣಕ್ಕೆ ಭೂತೀರ್ಥ, ಪಶ್ಚಿಮಕ್ಕೆ ಅನಂತ ಸರಸ್, ಉತ್ತರಕ್ಕೆ ಮುಕ್ತಸರಸ್ ಮತ್ತು ಪೂರ್ವಕ್ಕೆ ಮಣವಾಳ ಮಾಮುನಿಗಳು ಅನುಷ್ಠಾನ ಮಾಡುತ್ತಿದ್ದ ಜೀಯರ್‌ಕೊಳಂ ಮುಂತಾದ ಸ್ಥಾವರಗಳಿಂದ ಕ್ಷೇತ್ರವು ಆವರಿಸಲ್ಪಟ್ಟಿದೆ. ಕಲಿಯನರಿಗೆ ಪ್ರತ್ಯೇಕ ಸನ್ನಿಧಿಯನ್ನು ಮಣವಾಳ ಮಾಮುನಿಗಳು ಕಟ್ಟಿಸಿದರೆಂದು ಶಾಸನದಲ್ಲಿದೆ. ಕಾಲ ನಿಯಮವಿಲ್ಲದೆ ನಿತ್ಯಪುಷ್ಕರಿಣಿಯಲ್ಲಿ ಯಾವಾಗ ದೇಕಾದರೂ ಮಿಾಯಬಹುದು. ದೇವಸ್ಥಾನವನ್ನು ಪ್ರದಕ್ಷಿಣೆ ಮಾಡುವಾಗ -

ಐಶ್ವರ್ಯಂ ದೇಹಿ ಭಗವನ್
ಅಂತೇ ತವ ಪದಂಚಮೇ
ಉತ್ಪಲಾವತಕಾದೇಶ ಸ್ವಾಮಿನ್
ಸರ್ವೇಶ್ವರೇಶ್ವರೇಶ್ವರಃ

ಎಂದು ಹೇಳಿ ಮೂಲ ಸನ್ನಿಧಿಗೆ ಹೋಗುವ ಪದ್ಧತಿ ಇದೆ. ಆಳ್ವಾರುಗಳು 'ಸರ್ವೇಶ್ವರ' ಎಂದು ಹಲವಾರು ಬಾರಿ ಹಾಡಿರುತ್ತಾರೆ 'ಸರ್ವಲೋಕೇಶ್ವರನ್ ನಿರತಿಶಯ ಮಾಹ ಭೋಗ್ಯ ಮಾಹ ಇರುತ್ತಿರ' ಎಂದು ಆರಾಯಿರಪ್ಪಡಿ ವ್ಯಾಖ್ಯಾನಿಸುವುದು.

ಎರಡನೆ ಪ್ರಾಕಾರದಲ್ಲಿ ಕೃಷ್ಣ ಪುರೀಶ್ವರಿ ತಾಯಾರ್, ರಾಮಾನುಜ, ಕೂರೇಶ ಮತ್ತು ವರದ ದಂಪತಿಗಳ ಸನ್ನಿಧಿಗಳಿವೆ. ವಿಭೀಷಣನಿಗೆ ಪ್ರತ್ಯೇಕ ಸನ್ನಿಧಿ ಇದೆ. ಇಲ್ಲಿ ರಂಗನಾಥ ಮತ್ತು ಆಂಡಾಳ್ ಮೂಲಮೂರ್ತಿಗಳು, ಕುಲಶೇಖರಾಳ್ವಾರರ ಪ್ರಕಾರ ಶೌರಿರಾಜನು ಶ್ರೀರಂಗನಾಥನ ಇನ್ನೊಂದು ರೂಪ. ಆಳ್ವಾರರು ತಾವು ಕೌಸಲ್ಯೆಯಂತೆ, ಶೌರಿರಾಜನನ್ನು ಬಾಲ ರಾಮನಂತೆ ಭಾವಿಸಿಕೊಂಡು ೧೧ ಪದ್ಯಗಳಲ್ಲಿ 'ಕಣ್ಣಪುರತ್ತು ಕರುಮಣಿಯೇ ಇರಾಘವನೇ ತಾಲೇಲೋ' ಎಂದು ಲಾಲಿ ಹಾಡಿರುತ್ತಾರೆ (ಪೆರುಮಾಳ್ ತಿರುಮೊಳಿ 8).

ಬಾಲಕ ಕೃಷ್ಣನು ಗೆಜ್ಜೆ ಹಾಕಿಕೊಂಡು ಕುಣಿಯುವುದು, ಅಂದೆಗಾಳಿಡುವುದು - ಇನ್ನೂ ಮುಂತಾದ ಲೀಲೆಗಳನ್ನು ಪೆರಿಯಾಳ್ವಾರರು ತಾವು ಯಶೋದೆಯ ಸ್ಥಾನದಲ್ಲಿದ್ದಂತೆ ಭಾವಿಸಿಕೊಂಡು ಶೌರಿರಾಜನನ್ನು 'ಕಣ್ಣಪುರತ್ತು ಅಮುದು' ಎಂದು 'ಶಂಗಿಕ್ಕೈ'ದಶಕದಲ್ಲಿ ಕೊಂಡಾಡಿದ್ದಾರೆ.

ಆರಾಧನೆ - ಉತ್ಸವಗಳು . ಷಟ್ಕಾಲ ಪೂಜಾ ವಿಧಿಯಲ್ಲಿ ೧) ವಿಶ್ವರೂಪ ದರ್ಶನ - ಸುಪ್ರಭಾತ, ೨) ತಿರುವನಂದಲ್ (ದಧ್ಯೋದನ, ದೋಸೆ ನಿವೇದನೆ), ೩) ಉಚ್ಚಿಕಾಲಂ (ಅನ್ನ ಸಾರು, ಹುಳಿ, ಪಾಯಸ ನಿವೇದನೆ), ೪) ಸಾಯಂಕಾಲ ಪೂಜೆ, ೫) ರಾತ್ರಿ ತಳಿಕ್ಕೈ, ೬) ಅರ್ಧ ಜಾಮ ಪೂಜೆ - ಶಯನೋತ್ಸವದೊಂದಿಗೆ ಸನ್ನಿಧಿಯನ್ನು ಮುಚ್ಚುವರು ಉತ್ಸವಗಳಲ್ಲಿ : ೧)ಪಂಚಪರ್ವ ಉತ್ಸವ, ೨) ಪ್ರತಿ ಅಮಾವಾಸ್ಯೆಯಂದು ವಿಭೀಷಣ ಸೇವೆ, ೩) ಮಾಘ ಮತ್ತು ವೈಶಾಖಮಾಸಗಳಲ್ಲಿ ಬ್ರಹ್ಮೋತ್ಸವ ಸಮುದ್ರಸ್ನಾನ ಮತ್ತು ಶೌರಿರಾಜ - ಪದ್ಮಿನಿಯರ ಕಲ್ಯಾಣೋತ್ಸವ. ಈ ದಿನಗಳಲ್ಲಿ ಉತ್ಸವರನ್ನು ಕನ್ನಡಿ ಮಳಿಗೆಯಲ್ಲಿಟ್ಟಿರುವರು. ೪) ಶ್ರೀರಂಗದಂತೆ ಧನುರ್ಮಾಸದಲ್ಲಿ ಅಧ್ಯಯನೋತ್ಸವ. ಪ್ರತಿ ಸಂಜೆ ಜರುಗುವ ವೇದ ಗೋಷ್ಠಿ ಸೇವೆಯು ಆಳ್ವಾರರ ಕಾಲದಿಂದಲೂ ಬಂದಿರುತ್ತೆ.

ಎ) ಬ್ರಾಹ್ಮಣ ಸಮೂಹದ ವೇದಘೋಷ ಯಜ್ಞ ಯಾಗಗಳಿಂದ ಕಂಗೊಳಿಸುತ್ತಿರುವ ಕ್ಷೇತ್ರ - ವಾಯೆಡುತ್ತ ಮಂದಿರತ್ತಾಲ್ ಅಂದ ಇರ್ ತಮ್‌ಶೆಯ್ ತೊಳಿರ್ ಹಳ್ ತೀ ಎಡುತ್ತು ಮಕ್ಕೈ ವಳರ್ಕುಂ ತಿರುಕ್ಕಣಪುರಮ್ (ಪೆ. ತಿ. 8-3-5).

ಬಿ) ವೇದಕೋವಿದರು ಆಸೆಪಟ್ಟು ಅಧ್ಯಯನ ಮಾಡುವ ಕ್ಷೇತ್ರವಿದು- ಶುರುದಿಯೊಡು ಅರು ಮರ್ಕ್ಕೈ ಮುಕ್ಕೈಶೊಲ್ಲುಂ ಅಡಿಯವರ್ (ಪೆ.ತಿ. 8-7-7), ವೇದಾನಾವರ್ ವಿರುಂಬುಂತಿರುಕ್ಕಣ್ಣಪುರತ್ತು (ತಿರುವಾಯ್‌ಮೊಳಿ 9-10-9).

ಬ್ರಹ್ಮೋತ್ಸವದಲ್ಲಿ ಒಂದು ದಿನ ಮುನದರಯರ್ ಎಂಬ ಭಕ್ತರ ಕೈಂಕರ್ಯದ ನೆನಪಿಗಾಗಿ ಮಧ್ಯರಾತ್ರಿ ಪೊಂಗಲ್ ನಿವೇದನೆ ಇರುವುದು.

ಕಲಿಯನರ ಅದ್ಭುತ ಅನುಭವ: ತಿರುಮಂಗೈ ಆಳ್ವಾರರಿಗೆ ಸಿದ್ಧಿ ಕ್ಷೇತ್ರ ಇದು. ಭಗವಂತನೇ ತಮಗೆ ಪರಮಾಚಾರ್ಯ ಎಂದು ಭಾವಿಸಿ ಅತಿಶಯವಾಗಿ ಈ ಕ್ಷೇತ್ರವನ್ನು ೧೦೪ ಪಾಶುರಗಳಲ್ಲಿ ಕೊಂಡಾಡಿರುತ್ತಾರೆ :-

1. ಇದು ಕೇವಲ ಕಿವಿಯಿಂದ ಕೇಳಿದ ಜ್ಞಾನವಲ್ಲ. ಅವನ ಸಕೃದ್ದರ್ಶನದಿಂದ ಉಂಟಾದ ಜ್ಞಾನ. ನಾನಿರುವ ಜಾಗವನ್ನು ಅವನೇ ಹುಡುಕಿಕೊಂಡು ಬಂದ. ಇದಕ್ಕಿಂತ ದೇರೊಂದು ಭಾಗ್ಯ ನನಗೆ ದೇಕೆ ? ನನ್ನ ಜೀವನ ಸಾರ್ಥಕವಾಯಿತು.

ಎ) ವಂದಾಯ್ ಎನ್ ಮನತ್ತೇವನ್ದು ನೀ ಪುಹುಂದಾಯ್.

ಬಿ) ಅಡಿಯೇನ್ ಕಂಡುಕೊಂಡೇನೆ ಅಡಿಯೇನ್ ಉಯ್ಯುನ್ದ್ ಪೋನೇನೆ (8-8, 1 to 10)

2. 'ನಿನ್ನನ್ನು ಬಿಟ್ಟು ನಾನು ದೇರೆ ದೈವವನ್ನು ಮೊರೆ ಹೋಗೆನು' ಎಂದು ಹೇಳಿ ದೇವತಾಂತರವನ್ನು ಭಜಿಸುವವರ ಸ್ನೇಹವನ್ನು ಮಾಡುವುದಿಲ್ಲ ಎಂದು ಸ್ಪಷ್ಟಪಡಿಸುವರು - " ನಿನ್ನೈ ಅಲ್ಲಾಲ್ ಮರುತೇವರ್ ಮತ್ತುಳದು ಎನ್ರು ಮತ್ತೊರು ತೇಯ್‌ವಮ್ ಉಳ್ಳದು ಎನ್ರಿರುಪ್ಪಾರೊಡು".

3 ಭಕ್ತಿಯ ವಿವಿಧ ಪ್ರಾಕಾರಗಳನ್ನು ತೋರುವಾಗ ಮೊದಲು ಭಗವಂತನ ವಿಭವ ಅವತಾರಗಳನ್ನು ಶೌರಿರಾಜನಿಗೆ ಸಮೀಕರಿಸುವರು. ಅನಂತರ ನಾಯಕಿ ಭಾವದಿಂದ ಮಗಳ ಅನುಭವವನ್ನು ಹೇಳಿದರು. ('ಶಿಲೈ ಇಲಂಗು' ದಶಕ 8-1--1)

ಎ) ಕಣ್ಣಪುರ ಕಣ್ಣಪುರ ಎಂದು ಕನವರಿಸುವಳು - 'ವಾಯ್‌ವೆರುವಿನಾಳ್'

ಬಿ) ಊಟ ತಿಂಡಿ ನಿದ್ದೆ ಇಲ್ಲದೆ ಸದಾ ಅವನಲ್ಲೆ ಮನಸಿಟ್ಟುಕೊಂಡಿದ್ದಾಳೆ. ಅವನನ್ನು ನಾನು ಎಂದಿಗೂ ಅಗಲಲಾರೆ ಎಂದು ಹೇಳುವಳು 'ಓರುಕಾಲಂ ಪಿರಹಿಲೇನ್ ಆಲ್ ಎನ್ಗಿರಾಳ್' (8-1-9)

ಸಿ) ಸೇವೆ ಮಾಡಿಬಂದು ಅಯ್ಯೋ ನನ್ನ ಕೈಬಳೆಗಳನ್ನು ಅವನು ಕಸಿದುಕೊಂಡ ಎಂದು ಆಕ್ಷೇಪಿಸುತ್ತಾಳೆ - (8-2-1)

ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ.

## 'ಸುದರ್ಶನ' ದಮೂಲಕ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸಿರಿ.

* ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಭಕ್ತರು ಗಂಟೆಗಟ್ಟಲೆ ಕ್ಯೂಕಂಪಾರ್ಟ್‌ಮೆಂಟ್‌ಗಳಲ್ಲಿ ಕಾಯುವ ಪರಿಸ್ಥಿತಿಯನ್ನು ತಪ್ಪಿಸಲು 'ಸುದರ್ಶನ' ಟೋಕನ್ ಪದ್ಧತಿಯನ್ನು ಪ್ರವೇಶಗೊಳಿಸಲಾಗಿದೆ.
* ಈ ಟೋಕನ್‌ಗಳನ್ನು ತಿರುಪತಿಯ ರೈಲ್ವೆ ನಿಲ್ದಾಣದ ಹಿಂದಿರುವ ಎರಡನೆ ಸತ್ರದ ಬಳಿ ಹಾಗೂ ತಿರುಮಲೆಯ - ವೈಕುಂಠಂ ಕ್ಯೂ ಕಾಂಪ್ಲೆಕ್ಸ್ ಪಿ ಪಿಸಿ ಷೆಡ್‌ಗಳ ಬಳಿ ಒಬ್ಬ ವ್ಯಕ್ತಿಗೆ ಒಂದರಂತೆ ಉಚಿತವಾಗಿ ನೀಡಲಾಗುವುದು.
* ತಿರುಪತಿಯನ್ನು ಸೇರಿದ ಕೂಡಲೇ ತಾವು ಈ ಟೋಕನ್‌ಗಳನ್ನು ಪಡೆದಲ್ಲಿ, ತಮಗೆ ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನವಾಗುವ ಸಮಯವನ್ನು ಈ ಟೋಕನ್ ಮೂಲಕ ತಿಳಿಯಬಹುದು
* ಈ ಟೋಕನ್‌ಗಳಲ್ಲಿ ಸೂಚಿಸಿರುವ ಸಮಯಕ್ಕೆ ತಾವು ತಿರುಮಲೆಯ ಕ್ಯೂ ಕಾಂಪ್ಲೆಕ್ಸ್‌ಗೆ ಬಂದರೆ, ಈ ಟೋಕನ್‌ಗಳನ್ನು ಪರಿಶೀಲಿಸಿ, ಐದು ರೂಪಾಯಿನ ಲಾಡು ಟೋಕನ್ ಅನ್ನು ನೀಡಿ, ದರ್ಶನದ ಸಾಲಿನಲ್ಲಿ ತಮ್ಮನ್ನು ಸೇರಿಸಲಾಗುತ್ತದೆ
* ಸರತಿಯ ಸಾಲಿನಲ್ಲಿ ತಾವು ಸೇರಿದನಂತರ ಎರಡು ಗಂಟೆಗಳಲ್ಲಿ ತಮಗೆ ಸ್ವಾಮಿಯ ದರ್ಶನ ಸಾಧ್ಯವಾಗುತ್ತದೆ
* ತಾವು 'ಸುದರ್ಶನ' ಕಂಕಣವನ್ನು ಧರಿಸಿ ಸ್ನಾನ ಮೊದಲಾದ ನಿತ್ಯಕೃತ್ಯಗಳನ್ನು ನಡೆಸಿಕೊಳ್ಳಬಹುದು
* ಈ ಪದ್ಧತಿಯ ಮೂಲಕ ತಮಗೆ ದೊರಕಿದ ಬಿಡುವಿನ ಹೊತ್ತಿನಲ್ಲಿ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ, ಕಪಿಲತೀರ್ಥ, ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯಗಳನ್ನು ನೋಡಬಹುದು ಇದಕ್ಕಾಗಿ ಪ್ರತ್ಯೇಕವಾದ ಬಸ್‌ಗಳಿವೆ.

### ಎಚ್ಚರಿಕೆ :

1. 'ಸುದರ್ಶನ' ಟೋಕನ್‌ಗಳನ್ನು ತಿರುಮಲೆ ತಿರುಪತಿ ದೇವಸ್ಥಾನದವರ ಕೌಂಟರಿನಲ್ಲಿಯೇ ಪಡೆಯದೇಕು ಹೊರಗಡೆಯವು ಚಲಾವಣೆಯಾಗದು.
2 ದರ್ಶನವಾಗುವವರೆಗೆ ಕೈಗೆ ಕಟ್ಟಿದ ಕಂಕಣವನ್ನು ತೆಗೆಯಬಾರದು
3 ಟೋಕನ್‌ಗಳನ್ನು ಇತರರಿಗೆ ನೀಡಬಾರದು.
4 ವಂಚಕರ ಮಾತಿಗೆ ಮರುಳಾಗದಿರಿ
5. ಹತ್ತಿರದ ತಿ. ತಿ. ದೇವಸ್ಥಾನಗಳ ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

ಸುದರ್ಶನದ ಮೂಲಕ ಸುಖಪ್ರದ ಸುಲಭತರ ದರ್ಶನ ಪಡೆಯಿರಿ.
ತಮ್ಮ ಬಿಡುವಿನ ವೇಳೆಯನ್ನು ಸ್ಥಳೀಯ ಆಲಯಗಳ ದರ್ಶನದಲ್ಲಿ ಸಾರ್ಥಕ ಪಡಿಸಿಕೊಳ್ಳಿರಿ.

ಕಾರ್ಯನಿರ್ವಹಣಾಧಿಕಾರಿ,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.

ಡಿ) ಶೌರಿರಾಜನನ್ನು ಬಹುವಚನದಲ್ಲಿ ಕರೆಯುವಳು ಏನೂ ಅರಿಯದ ನನ್ನ ಮಗಳು ಇವನಿಗೆ ಕಟ್ಟುಬಿದ್ದಳಲ್ಲಾ - (8-2-6)

4 ವಿರಹಾವಸ್ಥೆಯಲ್ಲಿದ್ದ ನಾಯಕಿಯು ದುಂಬಿಯ ಮಾಧ್ಯಮದಿಂದ ಶೌರಿರಾಜನನ್ನು ಅರಿಕೆಮಾಡಿಕೊಂಡಂತೆ - ಕಲಿಯನ್ 8-4 ರಲ್ಲಿ ಹಾಡಿದ್ದಾರೆ.

5 ಆದ್ದರಿಂದ ಈ ದಿವ್ಯದೇಶ ಒಂದು ಜ್ಞಾನ ಸಾಧಕ ಕ್ಷೇತ್ರ. ಇದನ್ನು ಸೇವೆ ಮಾಡಿ ಉಜ್ಜೀವಿಸದೇಕು ನಮ್ಮಾಳ್ವಾರರೂ ಹೀಗೆಯೇ ಉಪದೇಶ ಮಾಡುವರು

ಎ) ತನತಾಳ್ ಅಡ್ಯೆಂದವರ್ಕೆಲ್ಲಾಮ್ ಪಿಣಿಯುಂ ಶಾರಾ (9-10-8)

ಬಿ) ತೊಳುದು ಎಳುಮಿನೊ (9-10-1)

ಸಿ) ತನ್ ತಿರುವಡಿಹಳ್ಕೆ ಅಡ್ಯೆಂದವರ್ಕು ದುಃಖ ಹೇತುಮಾನ ಸುಸಾರತ್ತೆ ಪೋಕಿರಾನ್ (ಆರಾಯಿರಪ್ಪಡಿ)

ಆಳ್ವಾರರ ಸೂಕ್ತಿಗಳ ಆಧಾರಿತವಾದ ಪ್ರಪತ್ತಿ ಹಾಗೂ ಮಂಗಳ ಶ್ಲೋಕ .

ಶ್ರೀಮತ್ ಶಠಾರಿ ಕುಲಶೇಖರ ಭಟ್ಟನಾಥ
ಗೋದಾಕಲ್ಯೆಷ್ಟ ಇತಿ ಸೂರಿವರಾನ್
ತವೇಮೆ, ಆಕಾಶದೇಹ
ಶುಭಮದ್ಭುತ ದಿವ್ಯಮೂರ್ತೇ
ಶೌರಿರಾಜ ಶರಣೌ ಶರಣಂ ಪ್ರಪದ್ಯೇ.

ನಿತ್ಯ ಪುಷ್ಕರಣೀತೀರ
ಲಸತಧಾಮ್ನೇ ದಯಾವತೇ
ಅಷ್ಟಾಕ್ಷರ ಶರೀರಾಯ
ಮುಕ್ತಿದಾಯಾಸ್ತು ಮಂಗಳಂ



# ಹಿಂದೂ ಸಂಸ್ಕೃತಿಯಲ್ಲಿ ಯಜ್ಞ

**- ಪ್ರೊ|| ವಿ. ಎಸ್. ಭಟ್ಟ**

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ
ಪುರೋವಾಚ ಪ್ರಜಾಪತಿಃ
ಅನೇನ ಪ್ರಸವಿಷ್ಯಧ್ವಂ
ಏಷವೋಸ್ತ್ವಿಷ್ಟಕಾಮಧುಕ್

- ಭಗವದ್ಗೀತೆ

ಯಜ್ಞಗಳೊಂದಿಗೆ ಪ್ರಜೆಗಳನ್ನು ಸೃಷ್ಟಿಸಿದ ಸೃಷ್ಟಿಕರ್ತನು ಈ ಯಜ್ಞದಿಂದ ನೀವು ಸಮೃದ್ಧಿಯನ್ನು ಹೊಂದಿರಿ "ಇದು ನಿಮ್ಮ ಇಷ್ಟಾರ್ಥಗಳನ್ನು ಈಡೇರಿಸುವ ಕಾಮಧೇನುವಾಗಲಿ" ಎಂದು ನುಡಿದನು

ಭಗವದ್ಗೀತೆಯ ಈ ವಾಕ್ಯದಿಂದ ಮನುಷ್ಯ ಸೃಷ್ಟಿಯೊಂದಿಗೆ ಯಜ್ಞಸೃಷ್ಟಿಯಾಯಿತೆಂದು ತಿಳಿದುಬರುತ್ತದೆ. ಅಗ್ನಿಗೂ ಮನುಷ್ಯನಿಗೂ ನಿತ್ಯ ಗಂಟು "ಮಖಾ ದಿಂದ್ರಶ್ಚಾಗ್ನಿಶ್ಚ" ಎಂಬ ವೇದೋಕ್ತಿಯಂತೆ ಪರಮಾತ್ಮನ ಮುಖದಿಂದ ಆದ ಅಗ್ನಿಯು ಪರಮಾತ್ಮನ ಮುಖವೆಂದೇ ಪರಿಗಣಿಸಲ್ಪಟ್ಟಿದೆ ಅಗ್ನಿಯ ಮೂಲಕ ಭಗವಂತನನ್ನು ಪೂಜಿಸುವುದು ಬಹು ಪ್ರಾಚೀನ ಕಾಲದಿಂದಲೂ ನಡೆದು ಬಂದ ಸಂಪ್ರದಾಯ. ಯಜ್ಞವು ನಮ್ಮ ಇಷ್ಟಾರ್ಥಗಳನ್ನು ಈಡೇರಿಸುವ ಕಾಮಧೇನು. ಮನುಷ್ಯನು ಐಹಿಕ ಆಮುಷ್ಮಿಕ ಒಳಿತಿಗಾಗಿ ಇಂತಹ ಯಜ್ಞ ಯಾಗಗಳ ಮೂಲಕ ದೇವತಾ ಸೇವೆ ಮಾಡಿದಾಗ ದೈವಾನುಗ್ರಹ ಖಚಿತವೆಂಬುದು ಭಾರತೀಯರ ನಂಬುಗೆ ಅಷ್ಟೇ ಅಲ್ಲ, ಭಗವಂತನ ಸಂದೇಶವೂ ಹೌದು 'ಮನುಷ್ಯನ ಆದಾಯದ ಒಂದು ಭಾಗ ಯಜ್ಞಾರ್ಥವಾಗಿ ವಿನಿಯೋಗವಾಗದೇಕು' ಎಂಬುದು ಶಾಸ್ತ್ರ ನಿಯಮ.

ದೇವಾನ್ ಭಾವಯತಾನೇನ
ದೇವಾ ಭಾವಯಂತು ವಃ
ಪರಸ್ಪರಂ ಭಾವಯಂತಃ
ಶ್ರೇಯಃ ಪರಂ ಅವಾಪ್ಸ್ಯಥ

-ಮನುಷ್ಯರು ಯಜ್ಞಯಾಗಗಳ ಮೂಲಕ ದೇವತೆಗಳನ್ನು ತೃಪ್ತಿ ಪಡಿಸಿದಾಗ ದೇವತೆಗಳು ಒಳ್ಳೆಯ ಮಳೆ-ಬೆಳೆ ನೀಡಿ ನಮ್ಮನ್ನು ಅನುಗ್ರಹಿಸುತ್ತಾರೆ 'ಯಜ್ಞಾದ್ಭವತಿ ಪರ್ಜನ್ಯಃ ಪರ್ಜನ್ಯಾದನ್ನ ಸಂಭವಃ' ಎಂಬ ಮಾತು ಗಮನಾರ್ಹ ಹೀಗೆ ಪರಸ್ಪರ ಸಹಕಾರದಿಂದ ದೇವತೆಗಳು ಹಾಗೂ ಮಾನವರು ಪರಮ ಶ್ರೇಯಸ್ಸನ್ನು ಪಡೆಯಬಹುದು ಯಜ್ಞರಿಂದ ಪೋಷಿತರಾದ ದೇವತೆಗಳು ಮಾನವರಿಗೆ ಇಮ್ಮಡಿ ಮುಮ್ಮಡಿ ನೀಡಿ ಇಷ್ಟಾರ್ಥ ಈಡೇರಿಸುತ್ತಾರೆ

'ಯಜ್ - ಪೂಜಾಯಾಂ' ಎಂಬಂತೆ ಯಜ್ ಎಂಬ ಧಾತುವಿನಿಂದ ಬಂದ 'ಯಜ್ಞ' ಪದಕ್ಕೆ 'ದೇವಪೂಜೆ' ಎಂಬುದೇ ಮುಖ್ಯವಾದ ಅರ್ಥ ಆದರೂ ರೂಢಿಯಲ್ಲಿ, 'ಅಗ್ನಿಯಲ್ಲಿ ಮಂತ್ರಪೂರ್ವಕ ಹವಿಸ್ಸನ್ನು ಅರ್ಪಿಸುವ ಕ್ರಿಯೆಗೆ ಯಜ್ಞವೆಂದು' ಕರೆಯಲಾಗುತ್ತದೆ. ಯಜ್ಞ-ಯಾಗ-ಹೋಮ-ಹವನ-ಸತ್ರ-ಕ್ರತು-ಇಷ್ಟಿ - ಇವುಗಳಲ್ಲಿ ಸೂಕ್ಷ್ಮಭೇದಗಳಿದ್ದರೂ, ಸ್ಥೂಲವಾಗಿ ಇವುಗಳೆಲ್ಲ ಯಜ್ಞದ ಪರಿಧಿಯಲ್ಲೇ ಬರುತ್ತವೆ ದ್ವಾಪರ, ಕಲಿಯುಗಗಳಲ್ಲಿ ಯಜ್ಞ - ದಾನಗಳಿಗೆ ತುಂಬ ಮಹತ್ವವಿದೆ. ಯಜುರ್ವೇದದ ಮಂತ್ರವೊಂದು ಯಜ್ಞ ಮಹಿಮೆಯನ್ನು ಸುಂದರವಾಗಿ ಈ ರೀತಿ ವರ್ಣಿಸುತ್ತದೆ

ಯಜ್ಞೇನ ಹಿ ದೇವಾ ದಿವಂಗತಾ,
ಯಜ್ಞೇನಾಸುರಾನಪಾನುದಂತ
ಯಜ್ಞೇನ ದ್ವಿಷಂತೋ ಮಿತ್ರಾಭವಂತಿ,
ಯಜ್ಞೇ ಸರ್ವಂ ಪ್ರತಿಷ್ಠಿತಂ
ತಸ್ಮಾದ್ಯಜ್ಞಂ ಪರಮಂ ವದಂತಿ

ಅಂದರೆ 'ದೇವತೆಗಳು ಯಜ್ಞಮಾಡಿ ಸ್ವರ್ಗ ಸೂರೆಗೊಂಡರು ಯಜ್ಞದಿಂದ ಅಸುರರನ್ನು ಗೆದ್ದರು ಯಜ್ಞದಿಂದ ಶತ್ರುಗಳೂ ಮಿತ್ರರಾಗುತ್ತಾರೆ ಹೀಗೆ ಯಜ್ಞದಲ್ಲಿ ಎಲ್ಲವೂ ನೆಲೆ ನಿಂತಿದೆ. ಆದ್ದರಿಂದಲೇ ಯಜ್ಞವು ಸರ್ವಶ್ರೇಷ್ಠವಾದುದು.

ಈ ವೇದವಾಣಿ ತುಂಬಾ ಗಮನಾರ್ಹವಾದುದು ಬೀಸುವ ಗಾಳಿ ಮಲೀನವಾದೀತು. ಆದರೆ ಜ್ಯೋತಿ ಸ್ವರೂಪವಾದ ಅಗ್ನಿ ಎಂದೂ ಮಲಿನವಾಗದು ಸ್ವತಃ ನಿರ್ಮಲವಾಗಿದ್ದು, ಯಾವ ಕೊಳೆಯನ್ನೂ ಶುದ್ಧೀಕರಿಸತಕ್ಕ ಶಕ್ತಿ, ಅಗ್ನಿಗೆ ಮಾತ್ರ. ಆದ್ದರಿಂದಲೇ ಅದು ಭಗವಂತನ ಪ್ರತೀಕ ಸಾಕ್ಷಾತ್ ನೇರವಾಗಿ ಸ್ವೀಕರಿಸುವ ಭಗವಂತನಂತೇ ಬೆಳಕಿನ ಪುಂಜ. ನಾವು ನೀಡಿದ ಹವಿಸ್ಸನ್ನು ಸ್ವೀಕರಿಸುವ ದೇವರೊಬ್ಬರಿದ್ದರೆ ಅದು ಅಗ್ನಿಮಾತ್ರ ಅಗ್ನಿ - 'ಹವ್ಯವಾಹ' ತನ್ನಲ್ಲಿ ನೀಡಿದ ಹವಿಸ್ಸನ್ನು ಆಯಾ ದೇವತೆಗಳಿಗೆ ತಲುಪಿಸಿ ಯಜ್ಞ

ಕರ್ತ್ಯವಿನ ಸಂಕಲ್ಪ ಈಡೇರುವಂತೆ ಮಾಡುವವ ಯಜ್ಞೇಶ್ವರ.

ನಮ್ಮ ಜಾನಪದ ಕಾವ್ಯಗಳೂ ಸಹ ಅಲ್ಲಲ್ಲಿ ಈ ಅಂಶ ಸ್ಪಷ್ಟಪಡಿಸಿರುವುದನ್ನು ಕಾಣಬಹುದು. ಉದಾಹರಣೆಗಾಗಿ 'ರುಕ್ಮಾಂಗದ ಚರಿತ್ರೆ'ಯೆಂಬ ಯಕ್ಷಗಾನ ಕಾವ್ಯದಲ್ಲಿ, ರುಕ್ಮಾಂಗದ ರಾಜನು ಮೋಹಿನಿಗೆ ತನ್ನನ್ನು ಈ ರೀತಿ ಪರಿಚಯಿಸುತ್ತಾನೆ.' ಸುರರಿಗೆ ಹವಿಗಳನು; ಯಾಗದಿ ಕರುಣಿಪ ದೊರೆ-ತಾಮು; ಸುರರಿಂದಧಿಕ ಸ್ವತಂತ್ರದೆ ನರರಿಗೆ....." ಈ ಮಾತು ತುಂಬಾ ಗಮನಾರ್ಹ. ಇದರಿಂದ ದೇವತೆಗಳನ್ನು ಪೋಷಿಸುವ ಸಾಮರ್ಥ್ಯ ಮನುಷ್ಯರಿಗಿರುವುದು ವೇದ್ಯವಾಗುತ್ತದೆ. ದೇವತೆಗಳು ಮನುಷ್ಯರಿಗೆ ಬೇಕಾದದ್ದನ್ನು ನೀಡಬಲ್ಲರಾದರೂ, ಅವರು ಉತ್ಪಾದಿಸುವ ಯಾವ ವಸ್ತುವನ್ನೂ ಅವರು ಸ್ವಂತಕ್ಕೆ ಬಳಸುವ ಸ್ವಾತಂತ್ರ್ಯವಿಲ್ಲ. ಅದು ವಿಧಿಯಾಜ್ಞೆ. ಆದುದರಿಂದ ಅವರು ನಾವು ಕೊಟ್ಟಾಗ ಪ್ರೀತಿಯಿಂದ ಸ್ವೀಕರಿಸುತ್ತಾರೆ. ಕೊಡದೇಕಾದದ್ದು ನಮ್ಮ ಕರ್ತವ್ಯ ಕೂಡಾ ಹೌದು.

ಮಹಾಕವಿ ಕಾಳಿದಾಸನು ತನ್ನ 'ರಘುವಂಶ' ಮಹಾಕಾವ್ಯದಲ್ಲಿ, ಮಹಾರಾಜ ದಿಲೀಪನ ಔದಾರ್ಯ ಗುಣಗಳನ್ನು ಹೀಗೆ ಪರಿಚಯಿಸುತ್ತಾನೆ-

ದುದೋಹ ಗಾಂ ಸಯಜ್ಞಾಯ,
ಸಸ್ಯಾಯ ಮಘವಾ ದಿವಮ್

ಶ್ರೀರಮಣ ಸರ್ವೇಶ ಸರ್ವಗ
ಸಾರಭೋಕ್ತೃ ಸ್ವತಂತ್ರ ಸರ್ವದ
ಪಾರ ಮಹಿಮೋದಾರ
ಸದ್ಗುಣಪೂರ್ಣ ಗಂಭೀರ
ಸಾರಿದವರಘ ದೂರಗೈಸೀ
ಸೂರಿಜನರಿಗೆ ಸೌಖ್ಯ ನೀಡುವ
ಧೀರವೆಂಕಟರಮಣ ಕರುಣದಿ
ಪೊರೆಯೊ ನೀ ಯೆನ್ನ
ಏನ ಬೇಡಲಿ ಎನ್ನ ದೇವನೆ
ಸಾನುರಾಗದಿ ಎನ್ನ ಪಾಲಿಸೊ
ನಾನ ವಿಧ ವಿಧ ಸೌಖ್ಯ ನೀಡುವುದಿಹ
ಪರಂಗಳಲಿ
ಶ್ರೀನಿವಾಸನೆ ನಿನ್ನ ದಾಸಗೆ
ಏನು ಕೊರತಿಲ್ಲೆಲ್ಲ ನೋಡಲು
ನೀನೆ ನಿಂತೀ ವಿಧದಿ ಪೊರೆವುದು
ಶೇಷಗಿರಿವಾಸ
**- ಗುರುಜಗನ್ನಾಥದಾಸರು.**

ಸಂಪತ್ ವಿನಿಮಯೇನ ಉಭೌ
ದಧತುಃ ಭುವನದ್ವಯಮ್

ಅಂದರೆ ದಿಲೀಪರಾಜನು ತನ್ನ ರಾಜ್ಯದಲ್ಲಿರುವ ಜನರಿಂದ ಕಂದಾಯವನ್ನು ಪಡೆದು ಯಜ್ಞಯಾಗಗಳನ್ನು ಮಾಡಿದರು ಅದರಿಂದ ಸಂತೋಷಗೊಂಡ ಇಂದ್ರನು ದೇವಲೋಕದಿಂದ ಭೂಮಿಯಲ್ಲಿ ಮಳೆಗರೆದು, ಭೂಮಿ ಸುಜಲ ಸುಫಲ ಸಸ್ಯ ಶ್ಯಾಮಲಿತವಾಗಿರುವಂತೆ ಮಾಡಿದನು. ಹೀಗೆ ದಿಲೀಪ ಇಂದ್ರರಿಬ್ಬರೂ, ಸೌಹಾರ್ದದಿಂದ ತಮ್ಮ ಸಂಪತ್ತನ್ನು ವಿನಿಮಯ ಮಾಡಿಕೊಂಡು, ಭೂಮಿ ಮತ್ತು ಸ್ವರ್ಗಗಳನ್ನು ಕಾಪಾಡಿದರು ಈ ರೀತಿ ದೇವತೆಗಳು ಹಾಗೂ ಮಾನವರ ಸಂಬಂಧ ಪರಸ್ಪರ ಸಾಪೇಕ್ಷವಾಗಿದೆ.ಮನುಷ್ಯರಲ್ಲಿ ಸಿರಿ ಸಂಪತ್ತು ಐಶ್ವರ್ಯ ತುಂಬಿ ತುಳುಕುತ್ತಿದ್ದರೆ ಅದು ಅವರದಲ್ಲ. ಅದು ಭಗವಂತನ ಅನುಗ್ರಹದಿಂದ ಬಂದಿದ್ದೆಂಬುದನ್ನು ಮರೆಯಬಾರದು. ಹಾಗೇ ಗಾಳಿ ನೀರು ಮಳೆ ಬೆಳಕು ಈ ಒಂದೊಂದೂ ನಮ್ಮ ಸ್ವತ್ತಲ್ಲ. ಇವುಗಳಿಲ್ಲದಿದ್ದರೆ ನಾವು ಬದುಕಲಾರೆವು. ಈ ಒಂದೊಂದೂ ಸೌಕರ್ಯವನ್ನೂ ನಿರಾಂತಕವಾಗಿ ಬಳಸಿ ಸುಖಪಡುವ ನಾವು ಈ ಅನುಗ್ರಹ ನೀಡಿದ ಭಗವಂತನನ್ನು ಮರೆಯದೆ, ಯಜ್ಞ-ಯಾಗದ ಮೂಲಕ, ಅವನು ಕೊಟ್ಟ ಐಶ್ವರ್ಯದ ಒಂದು ಅಂಶ ಅವನಿಗೆ ಅರ್ಪಿಸಿ, ಉಳಿದದ್ದನ್ನು ಅವನ ಅನುಗ್ರಹವೆಂದು ಭಾವಿಸಿ ಅನುಭವಿಸಬೇಕು. ಅದನ್ನೇ ದಾಸವರೇಣ್ಯರು "ಕೆರೆಯ ನೀರನ್ನು ಕೆರೆಗೆ ಚೆಲ್ಲಿ, ವರವ ಪಡೆದವರಂತೆ ಕಾಣಿರೋ; ಹಿರಿಯ ಕರುಣದಿ ಬಂದ ಭಾಗ್ಯವ, ಹರಿ ಸಮರ್ಪಣೆ ಮಾಡಿ ಬದುಕಿರೋ;" ಎಂಬ ನುಡಿಗಳ ಮೂಲಕ ಹಾಡಿ, ನಮ್ಮನ್ನು ಎಚ್ಚರಿಸಿದ್ದಾರೆ. ಕೇವಲ ತಮಗಾಗಿ ಅಡಿಗೆ ಮಾಡಿಕೊಳ್ಳುವವರು ಉಣ್ಣುವದು ಅನ್ನವನ್ನಲ್ಲ, ಪಾಪವನ್ನು, ನಮಗಾಗಿ ಇಷ್ಟೊಂದು ನೀಡಿದ ಭಗವಂತನಿಗೆ ಅರ್ಪಿಸಿ ಉಂಡಾಗ 'ಕೂಳು' 'ಪ್ರಸಾದ'ವಾಗುತ್ತದೆ.

ಯಜ್ಞಶೇಷವಾದ ಪ್ರಸಾದಕ್ಕೆ 'ಅಮೃತ' ಅಥವಾ 'ಇಡಾ' ಎಂದು ಹೆಸರು. ಯಜ್ಞ-ಯಾಗ ಮಾಡಿ ಪ್ರಸಾದ ಭುಂಜಿಸಿದವರ, ಪಾಪವೆಲ್ಲ ಹೋಗಿ ಸ್ವರ್ಗ ಲಭಿಸುವುದು. ಅವರ ಮುಖದಲ್ಲಿ ಕಾಂತಿ, ಮನೆಯಲ್ಲಿ ಶಾಂತಿ ನೆಲೆಸಿ, ಸಕಲ ಸುಖವನ್ನೂ ಅನುಭವಿಸುವರು ಇದನ್ನೇ ಭಗವದ್ಗೀತೆಯಲ್ಲಿ "ಯಜ್ಞಶಿಷ್ಟಾಮೃತ ಭುಜೋ ಯಾಂತಿ ಬ್ರಹ್ಮಸನಾತನಂ" ಎಂಬ ಮಾತಿನಲ್ಲಿ ಹೇಳಲಾಗಿದೆ

ಯಜ್ಞದಲ್ಲಿ ಅರ್ಪಿಸುವ ಯಾವ ಹವಿಸ್ಸೂ ವ್ಯರ್ಥವಲ್ಲ. ರೈತ ಮಣ್ಣಿಗೆ ಹಾಕಿದ ಬೀಜ, ಹತ್ತು ಇಪ್ಪತ್ತು ಪಟ್ಟು ಬೆಳೆಯಾಗಿ ಬರುವಂತೆ, ಅಗ್ನಿ ನಾರಾಯಣನೂ ಸುಪ್ರೀತನಾಗಿ ಭಕ್ತರ ಕಾಮನೆಗಳನ್ನು ವರ್ಷಿಸುತ್ತಾನೆ ಇಂಥ ಯಜ್ಞ ಸಂದರ್ಭದಲ್ಲಿ ಯಜಮಾನನಿಗೆ ಆರಂಭದಿಂದ ಅಂತ್ಯದವರೆಗೆ ಆ ಅಹಿಂಸೆ, ಸತ್ಯ ಶ್ರದ್ಧೆ, ನೈರ್ಮಲ್ಯ ದಾನ, ಮೌನ, ಮುಂತಾದ ವ್ರತ ದೀಕ್ಷೆ ಕಡ್ಡಾಯ. ಕೊನೆಯಲ್ಲಿ ಯಥಾಶಕ್ತಿ ಅನ್ನದಾನ, ಬ್ರಾಹ್ಮಣ ಭೋಜನ ನಡೆಯಲೇಬೇಕು ಯಜ್ಞದ ಬಿಡುವಿನ ವೇಳೆಯಲ್ಲಿ ಪುರಾಣ ಪ್ರವಚನ, ಬ್ರಹ್ಮವಿಚಾರ ಚರ್ಚೆ ಸಂಗೀತ ನಾಟಕಾದಿ ಕಲಾರಾಧನೆ ನಡೆಯಬೇಕು. ಇವೂ ಸಹ ಯಜ್ಞದ ಅಂಗಗಳೇ ಆಗಿವೆ.

ಯಜ್ಞಮಂಟಪ ವಿದ್ಯುದ್ದಾಗಾರವಿದ್ದಂತೆ. ವಿದ್ಯುತ್ತನ್ನು ಎಲ್ಲ ಜನರೂ ಬಳಸಬಹುದು. ಆದರೆ ವಿದ್ಯುಚ್ಛಕ್ತಿ ಉತ್ಪಾದಿಸುವ ಸ್ಥಳಕ್ಕೆ ಎಲ್ಲರೂ ಹೋಗುವಂತಿಲ್ಲ. ಹಾಗೆಯೇ ಯಜ್ಞದ ಫಲ ಎಲ್ಲರಿಗೂ ಲಭ್ಯ, ಆದರೆ ಯಜ್ಞ ಶಾಲೆಗೆ ಎಲ್ಲರಿಗೂ ಪ್ರವೇಶ ಸಿಗದು. ಕೆಲವೊಂದು ನಿಯಮ ನಿಷ್ಠೆಯಲ್ಲಿದ್ದು, ಮಡಿಯಾಗಿ, ದೀಕ್ಷೆಯಲ್ಲಿದ್ದವರಿಗೆ ಮಾತ್ರ ಯಜ್ಞಶಾಲಾ ಪ್ರವೇಶಕ್ಕೆ ಅವಕಾಶ. ಈ ರೀತಿ ನೇಮ ನಿಷ್ಠೆಯಿಂದ ಕರಾರುವಾಕ್ಕಾಗಿ ಯಜ್ಞ ನಡೆದಾಗ, ಕಾಮ್ಯವಾದ ದ್ರವ್ಯಯಜ್ಞದಿಂದ ಇಷ್ಟಪ್ರಾಪ್ತಿ ಮತ್ತು ಸ್ವರ್ಗ, ನಿಷ್ಕಾಮವಾದ ದ್ರವ್ಯಯಜ್ಞದಿಂದ ಚಿತ್ತ ಶುದ್ಧಿ, ಈ ಜ್ಞಾನ ಯಜ್ಞದಿಂದ ಮುಕ್ತಿ, ಮುಖ್ಯವಾದ ಫಲಗಳೆನ್ನಬಹುದು.

ಹೀಗೆ ಭಾರತೀಯರದು ಯಜ್ಞಸಂಸ್ಕೃತಿ. ಅಲ್ಲಿ ಯಜ್ಞಕ್ಕೆ ವಿಶಿಷ್ಟ ಸ್ಥಾನವಿದೆ. 'ಯಜ್ಞ' ಶಬ್ದಕ್ಕೆ ಅಲ್ಲಿ ವಿಶೇಷ ಕಲ್ಪನೆಯಿದೆ. ಪ್ರಾಣಿಗಳ ಜನ್ಮ ಅನ್ನದಿಂದ; ಅನ್ನವುಹುಟ್ಟುವುದು ಮಳೆಯಿಂದ; ಮಳೆ ಬೆಳೆ ಆಗುವುದು ಯಜ್ಞದಿಂದ. ಈ ರೀತಿ ಯಜ್ಞ ಚಕ್ರ ನಿರಂತರವಾಗಿ ಸುತ್ತುತ್ತಿರುವುದು ನಮ್ಮ ಸಂಸ್ಕೃತಿಯ ವೈಶಿಷ್ಟ್ಯವಾಗಿದೆ.



# ಶ್ರೀರಾಘವೇಂದ್ರಸ್ವಾಮಿಗಳು

- ಎಂ. ಎ. ಸಿಂಗಮ್ಮ

ಮಂತ್ರಾಲಯವೆಂಬುದು ಆಂಧ್ರಪ್ರದೇಶದಲ್ಲಿರುವ ತುಂಗಭದ್ರಾನದಿಯ ದಂಡೆಯ ಹತ್ತಿರ ಇರುವ ಒಂದು ಚಿಕ್ಕ ಹಳ್ಳಿ. ನಾನೂರು ವರ್ಷಗಳ ಹಿಂದೆ ಆ ಊರಿನ ಹೆಸರೇ ಯಾರಿಗೂ ತಿಳಿದಿರಲಿಲ್ಲ. ಆದರೆ ಇಂದು ಆ ಪ್ರದೇಶವು ಪ್ರಪಂಚದ ನಾನಾ ಭಾಗದ ಜನಗಳನ್ನು ಆಕರ್ಷಿಸುವ ಒಂದು ಪವಿತ್ರವಾದ ತಾಣವಾಗಿರುತ್ತದೆ. ಆ ಚಿಕ್ಕ ಹಳ್ಳಿಯು ರಾಘವೇಂದ್ರಸ್ವಾಮಿಗಳ ಪವಿತ್ರವಾದ ಬೃಂದಾವನವನ್ನು ಹೊಂದಿರುವುದರಿಂದ ಬಹಳ ಪ್ರಸಿದ್ಧಿಪಡೆದಿದೆ. ಅವರು ತಮ್ಮ ಭೌತಿಕ ಶರೀರವನ್ನು ತ್ಯಜಿಸಿ ನಾಲ್ಕು ನೂರುವರ್ಷಗಳಾದರೂ ಅವರ ಸನ್ನಿಧಿ ಆ ಬೃಂದಾವನದಲ್ಲಿ ಇರುವುದೆಂಬ ನಂಬಿಕೆಯು ಎಲ್ಲರಲ್ಲಿಯೂ ಇದೆ

ದೇವರೆಂದರೆ ತಿರುಪತಿ ತಿಮ್ಮಪ್ಪ ಮತ್ತು ಗುರುವೆಂದರೆ ಮಂಚಾಲೆಯ ರಾಘವೇಂದ್ರ ಎಂಬ ನಾಣ್ಣುಡಿಯು ಇದೆ. ಇದರಿಂದ ನಮ್ಮ ಮಹಾಪುರುಷರುಗಳ ಮಹಿಮೆಯನ್ನು ಅರಿಯಬಹುದು ಪಂಡಿತರಾಗಿದ್ದ ತಿರುಮಲ ಭಟ್ಟರಿಗೂ ಗೋಪಮ್ಮನಿಗೂ ತಂಜಾವೂರಿನ ಹತ್ತಿರವಿರುವ ಭುವನಗಿರಿಯಲ್ಲಿ 1591 ನೇ ಇಸವಿಯಲ್ಲಿ ರಾಘವೇಂದ್ರಸ್ವಾಮಿಗಳು ಜನಿಸಿದರು. ಆ ದಂಪತಿಗಳಿಗೆ ಮೊದಲು ವೆಂಕಮ್ಮನೆಂಬ ಮಗಳೂ, ಗುರುರಾಜನೆಂಬ ಮಗನೂ ಹುಟ್ಟಿ ಅವರುಗಳಿಗೆ ಮದುವೆ ಉಪನಯನ ಎಲ್ಲವನ್ನೂ ನಡೆಸಿದರು. ಆದರೆ ಇನ್ನೂ ಅವರಿಗೆ ಸಂತಾನಾಪೇಕ್ಷೆಯ ಹಂಬಲವು ತಪ್ಪದೆ ಇರಲು ಅವರುಗಳಿಬ್ಬರೂ ತಿರುಪತಿಗೆ ಹೋಗಿ ಶ್ರೀನಿವಾಸನಿಗೆ ಕಟ್ಟುನಿಟ್ಟಾದ ಸೇವೆ ಪ್ರದಕ್ಷಿಣೆಗಳನ್ನೆಲ್ಲಾ ಮಾಡಿ ಪೂಜಿಸಿದರು. ಇವರ ಸೇವೆಯಿಂದ ಪ್ರೀತನಾದ ಶ್ರೀನಿವಾಸನು ತಿರುಮಲ ಭಟ್ಟರಿಗೆ ಕನಸಿನಲ್ಲಿ ದರ್ಶನವನ್ನು ಇತ್ತು ಅವರಿಗೆ ವಿದ್ಯಾವಿಶಾರದನೂ, ಸರ್ವಜ್ಞನೂ, ಭಕ್ತನೂ ಆದ ಒಬ್ಬ ಪುತ್ರನು ಜನಿಸುವನೆಂದು ಹೇಳಿ ಅಂತರ್ಧಾನನಾದನು. ಸ್ವಾಮಿಯ ಅನಂತರ ಆ ದಂಪತಿಗಳಿಬ್ಬರೂ ಸಂತುಷ್ಟರಾಗಿ ಸ್ವಾಮಿಯ ದರ್ಶನವನ್ನು ಪಡೆದು ತಿರುಪತಿಯಿಂದ ಭುವನಗಿರಿಗೆ ಹಿಂತಿರುಗಿದರು. ನವಮಾಸದ ನಂತರ ಅವರಿಗೆ ಶುಭ ನಕ್ಷತ್ರದಲ್ಲಿ ಒಬ್ಬ ಪುತ್ರನು ಜನಿಸಿದನು ಅವನು ಸರ್ವಜ್ಞನಾಗಿಯೂ, ಸರ್ವರಿಂದ ವಂದನೀಯನಾಗಿ ಬಾಳುವನೆಂದು ಜ್ಯೋತಿಷಿಗಳು ಹೇಳಿದರು ಅವನು ಶ್ರೀನಿವಾಸನ ಅನುಗ್ರಹದಿಂದ ಜನಿಸಿದುದರಿಂದ ತಿಮ್ಮಣ್ಣಭಟ್ಟರು ಅವನಿಗೆ ವೆಂಕಟೇಶಭಟ್ಟನೆಂದು ನಾಮಕರಣವನ್ನು ಮಾಡಿದರು.

ಕೆಲವು ಕಾಲದ ನಂತರ ತಿಮ್ಮಣ್ಣ ಭಟ್ಟರ ಕಾಲವಾಗಲು ಅವರ ದೊಡ್ಡಮಗನಾದ ಗುರುರಾಜನೂ, ಅಳಿಯನಾದ ಲಕ್ಷ್ಮಿ ನರಸಿಂಹಾಚಾರ್ಯನೂ ಇವನನ್ನು ಬಹಳ ಪ್ರೀತಿಯಿಂದ ನೋಡಿಕೊಂಡು ಅವನಿಗೆ ಒಳ್ಳೆಯ ವಿದ್ಯಾಭ್ಯಾಸವನ್ನು ಮಾಡಿಸಿ ಸಕಲ ವೇದವಿದ್ಯಾಪಾರಂಗತನನ್ನಾಗಿ ಮಾಡಿದರು. ವೆಂಕಟೇಶನು ಬಹಳ ಮೇಧಾವಿಯಾಗಿ ಇದ್ದುದರಿಂದ ಎಲ್ಲ ವಿದ್ಯೆಗಳನ್ನೂ ಬಹಳ ವೇಗ ಗ್ರಹಿಸುತ್ತಿದ್ದನು.



ಇವನಿಗೆ ಸುಧಾವ್ಯಾಸಂಗವನ್ನು ಕಲಿಯದೇಕೆಂಬ ಹಂಬಲವು ಇದ್ದುದರಿಂದ ಸುಧೀಂದ್ರಸ್ವಾಮಿಗಳಲ್ಲಿ ವಾಸಂಗಮಾಡಲು ಕುಂಭಕೋಣಕ್ಕೆ ಹೋದನು ಅವರು ಇವನನ್ನು ನೋಡಿದೊಡನೆಯೇ ಇವನು ಪ್ರಪಂಚದ ಜನರ ಅಜ್ಞಾನವನ್ನೂ, ಕಷ್ಟಗಳನ್ನೂ ಪಾರುಮಾಡಲು ಹುಟ್ಟಿರುವ ಅವತಾರಪುರುಷನೆಂಬುದನ್ನು ಅರಿತುಕೊಂಡು ಅವನಿಗೆ ಸಂತೋಷದಿಂದ ಸುಧಾಪಾರವನ್ನು ಹೇಳಿಕೊಡುತ್ತಿದ್ದರು ಇವನು ಆರೋಗ್ಯವಂತನಾಗಿ ದಿವ್ಯ ತೇಜಸ್ಸಿನಿಂದ ಕೂಡಿದ್ದನು. ಅನೇಕ ವಿದ್ವಾಂಸರುಗಳು ಇವನ ಅಸಾಧಾರಣ ಪಾಂಡಿತ್ಯವನ್ನು ನೋಡಿ ಆಶ್ಚರ್ಯಪಡುತ್ತಿದ್ದರು ಆದರೆ ಗರ್ವಿಷ್ಠರಾದ ಕೆಲವರು ಇವನ ಸಹೋದ್ಯೋಗಿಗಳಿಗೆ ಇವನ ಪ್ರತಿಭೆಯು ಸಹ್ಯವಾಗದೆ ಇವನನ್ನು ಹೇಗಾದರೂ ಮಾಡಿ ಕುಂಭಕೋಣದಿಂದ ಓಡಿಸಬೇಕೆಂದು ಸಂಚುಮಾಡುತ್ತಿದ್ದರು ಅದಕ್ಕೋಸ್ಕರ ತಮ್ಮ ಗುರುಗಳ ಹತ್ತಿರ ಅವನ ವಿಷಯವಾಗಿ ದೋಷಾರೋಪಣೆ ಮಾಡಲು ಪ್ರಾರಂಭಿಸಿದರು ವೆಂಕಟೇಶನು "ಪರಿಮಳ" ಎಂಬ ಗ್ರಂಥದಲ್ಲಿ ತಾನು ವ್ಯಾಸಂಗಮಾಡಿದ ಪ್ರಮೇಯಾಂಶಗಳ ಮುಖ್ಯ ವಿಷಯಗಳನ್ನೆಲ್ಲಾ ಬರೆದಿಡುತ್ತಿದ್ದನು ಒಮ್ಮೆ ಗುರುಗಳು ಅವನ ಕೊಠಡಿಯಲ್ಲಿ ಅವನ "ಪರಿಮಳ" ಗ್ರಂಥವನ್ನು ನೋಡಿ ಅದನ್ನು ಬಹಳ ಮೆಚ್ಚಿ ಅವನು ಮುಂದೆ ಅನೇಕ ಗ್ರಂಥಗಳನ್ನು ರಚಿಸಿ ಈಶ್ವರ ಕೃಪೆಗೆ ಪಾತ್ರನಾಗುವಂತೆ ಹರಸಿದರು. ಅನಂತರ ಅವನ ಪರಿಮಳ ಗ್ರಂಥವನ್ನು ಬಿಡುಗಡೆ ಮಾಡಿ ಅವನಿಗೆ "ಪರಿಮಳಾಚಾರ್ಯ"ನೆಂಬ ಬಿರುದನ್ನು ದಯಪಾಲಿಸಿದರು. ಮುಂದೆ ವೆಂಕಟೇಶನು ಅನೇಕ ವಿದ್ವಾಂಸರ ಜೊತೆಯಲ್ಲಿ ವಾದ ಮಾಡಿ ಅವರನ್ನು ಸೋಲಿಸಲು ಅವನಿಗೆ ಗುರುಗಳು ಮತ್ತೆ ಮಹಾಭಟ್ಟಾಚಾರ್ಯನೆಂಬ ಬಿರುದನ್ನೂ ದಯಪಾಲಿಸಿದರು. ಇಷ್ಟು ದಿವಸವೂ ವೆಂಕಟೇಶ ಭಟ್ಟರಾಗಿದ್ದವರು ಮುಂದೆ ಅವನ ಪ್ರತಿಭೆಯಿಂದ "ಮಹಾಭಾಷ್ಯ ಪರಿಮಳ ಭಟ್ಟಾಚಾರ್ಯ"ರೆಂದು ಕರೆಯಲ್ಪಟ್ಟು ಅವರು ತಿರುಗಿ ಭುವನಗಿರಿಗೆ ವಾಪಸ್ಸು ಬಂದಾಗ ಅಲ್ಲಿನವರು ಅವರ ಪಾಂಡಿತ್ಯವನ್ನು ಗುರುತಿಸಿ ಅವರಿಗೆ ಬಹಳ ಮರ್ಯಾದೆಯನ್ನು ಮಾಡಿದರು.

ಸುಧೀಂದ್ರಸ್ವಾಮಿಗಳ ಆದೇಶದ ಮೇರೆಗೆ ಅಲ್ಲಿಯ ಮಠದಲ್ಲಿ ಪಾಠಪ್ರವಚನಗಳನ್ನು ಮಾಡಿಕೊಂಡು, ಅಲ್ಲಿನ ತೀರ್ಥಪ್ರಸಾದಗಳಿಂದ ಸಂತುಷ್ಟರಾಗಿ ಕೆಲವು ಕಾಲ ಅಲ್ಲಿಯೇ ನೆಲೆಸಿದ್ದರು ಅನಂತರ ಸುಧೀಂದ್ರಸ್ವಾಮಿಗಳಿಗೆ ದೇಹಾಲಸ್ಯವುಂಟಾಗಲು ಅವರು ಚಿಂತಾಕ್ರಾಂತರಾಗಿ ಇವರನ್ನು ಆಶ್ರಮ ಸ್ವೀಕಾರವನ್ನು ಮಾಡುವಂತೆ ಆದೇಶವಿತ್ತರು ಸಂಸಾರಸ್ಥರಾದ ಇವರು ತಮ್ಮ ಪ್ರೀತಿಯ ಪತ್ನಿ ಪುತ್ರರನ್ನು ತ್ಯಜಿಸಿ ಆಶ್ರಮಸ್ವೀಕಾರ ಮಾಡಲು ಹಿಂಜರಿದರು ಆದರೆ ಸುಧೀಂದ್ರಸ್ವಾಮಿಗಳಿಗೆ ಇವರನ್ನೇ ಮುಂದಿನ ಸಂಸ್ಥಾನ ಪಾಲಕರನ್ನಾಗಿ ಮಾಡಬೇಕೆಂಬ ಇಚ್ಛೆಯಿದ್ದುದರಿಂದಲೂ, ಅವರ ಮೂಲರಾಮನ ಇಚ್ಛೆಯೂ ಅದೇ ಆಗಿದ್ದುದರಿಂದಲೂ ಸುಧೀಂದ್ರಸ್ವಾಮಿಗಳು ಇವರ ಸಂಸ್ಕಾರಕ್ಕೆ ನೆರವು ನೀಡಲು ಅವರಿಗೆ ಬಹಳ ಧನಸಹಾಯವನ್ನು ಮಾಡಿದರು ಅಲ್ಲದೆ ಅವರ ಮಗನ ಉಪನಯನವನ್ನು ಅವರ ಅಣ್ಣನ ಮತ್ತು ಭಾವನವರ ನೇತೃತ್ವದಲ್ಲಿ ನಡೆಸಿದರು ಪರಿಮಳಾಚಾರ್ಯರು ತಮಗೆ ಕೊಟ್ಟ ಧನವನ್ನೆಲ್ಲಾ ಸರಸ್ವತಿಗೆ ಕೊಟ್ಟು ಸ್ವಾಮಿಯವರು ತಮ್ಮನ್ನು ಆಶ್ರಮ ಸ್ವೀಕಾರ ಮಾಡುವಂತೆ ಕೊಟ್ಟಿರುವ ಆದೇಶವನ್ನು ತಿಳಿಸಲು ಅವಳು ತಕ್ಷಣ ಸ್ಮೃತಿ ತಪ್ಪಿಬಿದ್ದುಬಿಟ್ಟಳು ಅನಂತರ ಸ್ವಲ್ಪಕಾಲಾನಂತರ ಚೇತರಿಸಿಕೊಂಡು "ತಮ್ಮ ಚಿತ್ತ" ಎಂದು ಅವರಿಗೆ ತಿಳಿಸಿದಳು ಅನಂತರ ಪರಿಮಳಾಚಾರ್ಯರು ತಮ್ಮ ಅಣ್ಣ ಮತ್ತು ಭಾವನವರಿಗೆ ತಮ್ಮ ಆಶ್ರಮ ಸ್ವೀಕಾರವನ್ನು ತಿಳಿಸಿ ಸರಸ್ವತಿಯನ್ನು ಅವರೊಂದಿಗೆ ಭುವನಗಿರಿಗೆ ಕಳುಹಿಸಿಬಿಟ್ಟರು

ಅನಂತರ ಸುಧೀಂದ್ರಸ್ವಾಮಿಗಳು ತಂಜಾವೂರಿಗೆ ಪರಿಮಳಾಚಾರ್ಯರೊಂದಿಗೆ ಪ್ರಮಾಣ ಮಾಡಿ ಅಲ್ಲಿನ ರಾಜನಿಗೆ ಸಮಯವರಿತು ತಮ್ಮ ದೇಹಾಲಸ್ಯವನ್ನು ತಿಳಿಸಿ ಅದರಿಂದ ಮುಂದಕ್ಕೆ ತಮ್ಮ ಸ್ಥಾನದಲ್ಲಿ ಪರಿಮಳಾಚಾರ್ಯರಿಗೆ ಆಶ್ರಮವನ್ನು ಕೊಟ್ಟು ಅವರಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದು ತಿಳಿಸಿದರು. ರಾಜನು ಅವರ ನೇಮನವನ್ನು ನಡೆಸುವುದಾಗಿ, ಮಾತು ಕೊಟ್ಟನು ಪರಿಮಳಾಚಾರ್ಯರು ತಮ್ಮ ಕರ್ತವ್ಯದ ಕರೆಗೆ ಓಗೊಟ್ಟು ತಮ್ಮ ಸಂಸಾರಬಂಧನವನ್ನು ಕಿತ್ತೆಸೆದು ತಮ್ಮ ಆಶ್ರಮ ಸ್ವೀಕಾರಕ್ಕೆ ಸಂತೋಷದಿಂದ ಒಪ್ಪಿಗೆಯಿತ್ತರು ಅನಂತರ ಅವರಿಗೆ ಆತ್ಮಶ್ರಾದ್ಧಾದಿಕರ್ಮಗಳು ಸಾಂಗವಾಗಿ ನಡೆದು ರಾಜಮರ್ಯಾದೆಯಿಂದ ಪಟ್ಟಾಭಿಷೇಕವು ನಡೆದು ಅವರಿಗೆ ಶ್ರೀ ರಾಘವೇಂದ್ರಸ್ವಾಮಿ ಎಂಬ ಆಶ್ರಮನಾಮವಾಯಿತು ನಂತರ ಇಬ್ಬರು ಸ್ವಾಮಿಗಳೂ ಕುಂಬಕೋಣಕ್ಕೆ ಬಂದು ಅದ್ದೂರಿಯಾದ ಸ್ವಾಗತವನ್ನು ಪಡೆದರು ಹಿರಿಯ ಸ್ವಾಮಿಗಳು ರಾಘವೇಂದ್ರ ಸ್ವಾಮಿಗಳಿಗೆ ಉಪದೇಶಿಸಿದರು ಇವರು ಸ್ವಾಮಿಗಳಾದ ಮೇಲೆ ಸುಧೀಂದ್ರರು ತಮ್ಮ ಅಂತಿಮಕಾಲವನ್ನು ವಿರೂಪಾಕ್ಷ ಪಂಪಾಕ್ಷೇತ್ರದಲ್ಲಿ ಕಳೆದು ಅಲ್ಲಿಯೇ ತುಂಗಭದ್ರೆಯ ತೀರದಲ್ಲಿ ಸಮಾಧಿಸ್ಥರಾದರು ಆ ಜಾಗಕ್ಕೆ ನವ ಬೃಂದಾವನವೆಂದು ಹೆಸರಾಯಿತು

ಪರಿಮಳಾಚಾರ್ಯರು ಸನ್ಯಾಸವನ್ನು ಸ್ವೀಕಾರ ಮಾಡಿ ರಾಘವೇಂದ್ರಸ್ವಾಮಿಗಳಾದ ಸಮಾಚಾರವನ್ನು ತಿಳಿದ ಸರಸ್ವತಿಯು ತನ್ನ ದುಃಖವನ್ನು ಸೈರಿಸಲಾರದೆ ಬಾವಿಯಲ್ಲಿ ಬಿದ್ದು ತನ್ನ ಅಸುನೀಗಿದಳು ಈ ದುರ್ಮರಣದಿಂದ ಅವಳಿಗೆ ಪಿಶಾಚಿ ಜನ್ಮವು ಪ್ರಾಪ್ತವಾಗಲು ರಾಘವೇಂದ್ರಸ್ವಾಮಿಗಳು ತಮ್ಮ ತಪಃಶಕ್ತಿಯಿಂದ ಅವಳ ಆ ಹೀನಸ್ಥಿತಿಯನ್ನು ಪರಿಹರಿಸಿದರು ಅಲ್ಲದೆ ತಮ್ಮ ಗೋತ್ರದವರು ಯಾವ ಶುಭಕಾರ್ಯವನ್ನು ಮಾಡಿದರೂ ಅವರು ಮೊದಲು ಸುವಾಸಿನಿ ಪೂಜೆಯನ್ನು ಮಾಡಬೇಕೆಂಬ ಪದ್ಧತಿಯನ್ನು ಜಾರಿಗೆ ತಂದರು

ರಾಘವೇಂದ್ರಸ್ವಾಮಿಗಳು ಆಶ್ರಮಸ್ವೀಕಾರವನ್ನು ಮಾಡಿದ ಮೇಲೆ ಕಷ್ಟಪಡುತ್ತಿರುವವರ ಸಂಕಟಗಳನ್ನು ಪರಿಹರಿಸಿ ಅವರುಗಳಿಗೆ ಹತ್ತಿರದ ಬಂಧುವಾದರು. ಎಲ್ಲರನ್ನೂ ಪ್ರೀತಿಸಿ ಅವರ ಕಾಯಿಲೆಗಳನ್ನೂ, ದುರಂತಗಳನ್ನೂ ವಾಸಿಮಾಡಿ ಅವರಲ್ಲಿ ಭಗವದ್ಭಕ್ತಿಯನ್ನು ಹೆಚ್ಚಿಸಿದರು. ಭಗವಂತನು ಎಲ್ಲಿಯೋ ದೂರದಲ್ಲಿ ಇಲ್ಲ, ನಮ್ಮಲ್ಲಿಯೇ ಇದ್ದಾನೆ ಎಂಬುದನ್ನು ನಾಸ್ತಿಕರಿಗೂ, ಆಸ್ತಿಕರಿಗೂ ಚೆನ್ನಾಗಿ ಮನದಟ್ಟಾಗುವಂತೆ ಅನೇಕ ಪವಾಡಗಳನ್ನು ಮಾಡಿ ನಂಬುವಂತೆ ಮಾಡಿದರು. ಅವರು ತಾವು ಯಾರಿಗೆ ಏನು ಸಹಾಯ ಮಾಡಿದರೂ ಎಲ್ಲವೂ ಭಗವಂತನ ಕೈಂಕರ್ಯವೆಂದು ಭಾವಿಸಿ ನಿಸ್ವಾರ್ಥತೆಯಿಂದ ಮಾಡುತ್ತಾ, ಅದರಿಂದ ತಮಗೆ ಯಶಸ್ಸನ್ನಾಗಲೀ ಕೀರ್ತಿಯನ್ನಾಗಲೀ ಸ್ವಲ್ಪವೂ ಆಶಿಸದೆ ಮಹಾಪುರುಷರಾದರು ಇವರು ನಿತ್ಯವೂ ಬೆಳಗ್ಗಿನಜಾವವೇ ಎದ್ದು ಸ್ನಾನ ಮುಂತಾದ ಆಹ್ನೀಕಗಳನ್ನು ಮುಗಿಸಿಕೊಂಡು ತಮ್ಮ ಮಠದ ದಿಷ್ಟ ಮೂರ್ತಿಗಳ ಆರಾಧನೆಯನ್ನು ಮಾಡಿ ಶಿಷ್ಯರಿಗೆ ವೇದಾಂತ ಪ್ರವಚನವನ್ನು ಮಾಡುತ್ತಿದ್ದರು. ಭಗವಂತನ ಪೂಜೆಯನ್ನು ಬಹಳ ಭಕ್ತಿಯಿಂದಲೂ

ನಿಷ್ಠೆಯಿಂದಲೂ ಮಾಡುತ್ತಾ, ಅವನ ಕೀರ್ತನೆಗಳನ್ನೂ ಸ್ತೋತ್ರಗಳನ್ನೂ ಹಾಡುತ್ತಾ ರಾಮಕೃಷ್ಣಾದಿ ಅವತಾರಗಳ ವೈಭವವನ್ನು ತಾವು ಸ್ವಂತವಾಗಿ ಅನುಭವಿಸಿ ಜ್ಞಾನದ ಪರಮಾವಧಿಗೆ ಏರಿದರು ವ್ಯಾಸತೀರ್ಥರಿಂದ ರಚಿಸಲ್ಪಟ್ಟ ಚಂದ್ರಿಕಾಗ್ರಂಥಕ್ಕೆ ಪ್ರಕಾಶವೆಂಬ ಟೀಕೆಯನ್ನೂ, ತಂತ್ರದೀಪಿಕಾ ಎಂಬುದಕ್ಕೆ ನ್ಯಾಯಮುಕ್ತಾವಳಿ ಎಂಬ ವ್ಯಾಖ್ಯಾನವನ್ನೂ ಬರೆದರು

ಇವರು ಅನೇಕ ಪವಾಡಗಳನ್ನು ನಡೆಸಿದರು ಇವರು ಲೋಕದ ಜನರನ್ನು ಶಾರೀರಕವಾಗಿಯೂ, ಮಾನಸಿಕವಾಗಿಯೂ ಅವರ ಕಷ್ಟಗಳನ್ನು ಪರಿಹರಿಸುತ್ತಾ ಬೇರೆ ಬೇರೆ ಊರುಗಳಲ್ಲಿ ಸಂಚರಿಸುತ್ತಿದ್ದಾಗ ತಂಜಾವೂರಿನಲ್ಲಿ ಮಳೆ ಬೆಳೆಗಳಿಲ್ಲದೆ ಭಯಂಕರವಾದ ಕ್ಷಾಮವುಂಟಾಯಿತು ಲಕ್ಷಾಂತರ ಜನರು ಸತ್ತರು. ಗೋವುಗಳೂ ನಾಶವಾದವು. ಆಗ ಅಲ್ಲಿನ ರಾಜನು ಸ್ವಾಮಿಗಳ ಪಾದಕ್ಕೆರಗಿ ಕ್ಷಾಮ ನಿವಾರಣೆ ಮಾಡಬೇಕೆಂದು ಪ್ರಾರ್ಥಿಸಲು ಇವರು ಶ್ರೀದೇವಿಯನ್ನು ಪ್ರಾರ್ಥಿಸಿ ತಮ್ಮ ತಪಃಶಕ್ತಿಯಿಂದ ಮಳೆಸುರಿಯುವಂತೆ ಮಾಡಿದರು ಇದರಿಂದ ಎಲ್ಲೆಲ್ಲೂ ಧಾನ್ಯವು ಸಮೃದ್ಧಿಯಾಗಿ ಬೆಳೆದು ಕ್ಷಾಮನಿವಾರಣೆ ಯಾಯಿತು ಹಿಂದೆ ದ್ರೌಪದಿಗೆ, ದೂರ್ವಾಸರಿಗೆ ಮೃಷ್ಟಾನ್ನವನ್ನು ಉಣಿಸುವಂತೆ ಸಹಾಯ ಮಾಡಿದ ಶ್ರೀಕೃಷ್ಣನು ರಾಘವೇಂದ್ರರಿಗೆ ಸಹಾಯ ಮಾಡಿದನು ಇವರ ಸಹಾಯದಿಂದ ಸುಪ್ರೀತನಾದ ರಾಜನು ಇವರಿಗೆ ವಜ್ರವೈಡೂರ್ಯಗಳಿಂದ ಕೂಡಿದ ಒಂದು ರತ್ನಾಹಾರವನ್ನು ಬಹುಮಾನವಾಗಿ ಕೊಟ್ಟನು ಅದನ್ನು ಸ್ವಾಮಿಗಳು ಅಗ್ನಿ ನಾರಾಯಣನಿಗೆ ಸಮರ್ಪಿಸಲು ಅದು ಸುಟ್ಟುಬೂದಿಯಾಯಿತು. ಆಗ ರಾಜನು ಬಹಳ ವ್ಯಸನಾಕ್ರಾಂತನಾಗಲು ಸ್ವಾಮಿಗಳು ತಮ್ಮ ಅದ್ಭುತವಾದ ಶಕ್ತಿಯಿಂದ ರತ್ನಾಹಾರವನ್ನು ದೆಂಕಿಯ ತೆಗೆದರು. ಮೊದಲಿನಂತೆ ಆ ಸರವು ಹೊಸದರಂತೆ ಹೊಳೆಯುತ್ತಿದ್ದಿತು. ಸ್ವಾಮಿಗಳ ಪವಾಡದಿಂದ ನಡೆದ ಈ ಘಟನೆಯನ್ನು ನೋಡಿ ಎಲ್ಲರೂ ಆಶ್ಚರ್ಯಭರಿತರಾದರು.

ಒಮ್ಮೆ ಸ್ವಾಮಿಗಳು ಮೈಸೂರಿಗೆ ಬಂದಿದ್ದಾಗ ಇವರನ್ನು ಮರ್ಯಾದೆ ಮಾಡಲು ಅನೇಕ ಜನರು ಸೇರಿದ್ದು ಎಲ್ಲರಿಗೂ ಮಾವಿನಹಣ್ಣಿನ ಸೀಕರಣೆಯ ಸಂತರ್ಪಣೆಯು ಏರ್ಪಾಡಾಗಿದ್ದಿತು. ಮರದ ತೊಟ್ಟಿಗಳಲ್ಲಿ ಸೀಕರಣೆಯು ತುಂಬಲ್ಪಟ್ಟಿದ್ದಿತು. ಆದ ಒಬ್ಬ ಶ್ರೀಮಂತನ 5-6 ವರ್ಷದ ಮಗನು ಆಕಸ್ಮಾತ್ತಾಗಿ ಸೀಕರಣೆ ತುಂಬಿದ ತೊಟ್ಟಿಯಲ್ಲಿ ಬಿದ್ದು ಮೃತನಾದನು ಆಗ ಶ್ರೀಮಂತದ ದಂಪತಿಗಳ ದುಃಖವನ್ನು ನೋಡಿ ಸ್ವಾಮಿಗಳು ಆ ಸತ್ತ ಮಗುವನ್ನು ತರುವಂತೆ ಹೇಳಿ ತಮ್ಮ ಮಂತ್ರಪೂರಿತವಾದ ನೀರನ್ನು ಆ ಮಗುವಿನ ಮೇಲೆ ಪ್ರೋಕ್ಷಿಸಲು ಆ ಮಗುವು ಬದುಕಿ ಎದ್ದು ಕೂತುಕೊಳ್ಳಲು ಎಲ್ಲರೂ ಸಂತೋಷಭರಿತರಾದರು ಸ್ವಾಮಿಗಳ ಈ ಪವಾಡ ಶಕ್ತಿಯನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು

ಈ ರೀತಿ ಅವರ ಅಸಾಧಾರಣಶಕ್ತಿಯು ಪ್ರಭಾವವು ಎಲ್ಲೆಡೆಗೂ ಹಬ್ಬಿತು ಅವರು ಎಲ್ಲೆಲ್ಲಿ ಹೋದರೂ ಅಲ್ಲಿನ ಜನಗಳು ತಮ್ಮ ಕಾಯಿಲೆಯಲ್ಲಿರುವ ಬಂಧುಗಳನ್ನು ಕರೆದುಕೊಂಡು ಬಂದು ಅವರ ಹತ್ತಿರ ಗುಣ ಪಡಿಸಿಕೊಂಡು ಹೋಗುತ್ತಿದ್ದರು ಒಬ್ಬನವಾಬನ ಮಗನು ಹಾವಿನಿಂದ ಕಚ್ಚಲ್ಪಟ್ಟು ಸತ್ತುಹೋಗಲು ಆ ನವಾಬನು ಇವರನ್ನು ತನ್ನ ಮಗನನ್ನು ಬದುಕಿಸಿಕೊಡುವಂತೆ ಪ್ರಾರ್ಥಿಸಿದನು ಆಗ ಅವರು ತಮ್ಮ ತೀರ್ಥ ಪ್ರೋಕ್ಷಣೆಯಿಂದ ಅವನನ್ನು ಬದುಕಿಸಲು ನವಾಬನು ಸಂತುಷ್ಟನಾಗಿ ಅವರಿಗೆ ಅನೇಕ ಬಹುಮಾನಗಳನ್ನು ಕೊಟ್ಟನು. ಇವರ ಈ ಪವಾಡವನ್ನು ನೋಡಿ ನವಾಬನು ಬೆರಗಾದನು.

ಇವರ ಮಹಿಮೆಯನ್ನು ಯಶಸ್ಸನ್ನೂ ನೋಡಿ ಕೆಲವು ಅಸೂಯಾಪರರಾದ ಕುಹಕಿಗಳು ಇವರನ್ನು ಪರೀಕ್ಷಿಸಲು ಒಣಗಿದ ಒಂದು ಮರದ ತುಂಡನ್ನು ಇವರಿಗೆ ತಂದುಕೊಟ್ಟು ಅದನ್ನು ಚಿಗುರುವಂತೆ ಮಾಡಬೇಕೆಂದು ಇವರಿಗೆ ಸವಾಲನ್ನು ಹಾಕಿದರು. ಸ್ವಾಮಿಯವರು ಅವರ ಪರೀಕ್ಷೆಯನ್ನು ನಡೆಸಲು ಒಪ್ಪಿ ನಿತ್ಯವೂ ತಮ್ಮ ಪವಿತ್ರವಾದ ತೀರ್ಥವನ್ನು ಆ ಮರದ ತುಂಡಿಗೆ ಪ್ರೋಕ್ಷಿಸುತ್ತಿರಲು ಅದು ಸ್ವಲ್ಪದಿವಸದಲ್ಲಿಯೇ ಚಿಗುರಿತು. ಇವರ ಈ ಪವಾಡವನ್ನು ನೋಡಿ ಅವಮಾನಹೊಂದಿದ ಆ ಕುಹಕಿಗಳು ತಮ್ಮನ್ನು ಕ್ಷಮಿಸುವಂತೆ ಪ್ರಾರ್ಥಿಸಿದರು. ಕೆಲವು ವಿರೋಧಿಗಳು ಬದುಕಿದ್ದ ಒಬ್ಬನನ್ನು ಸತ್ತಿರುವುದಾಗಿ ಇವರಿಗೆ ಸುಳ್ಳು ಹೇಳಲು ಇವರ ಮಂತ್ರಶಕ್ತಿಯಿಂದ ಅವನು ನಿಜವಾಗಿಯೂ ಸತ್ತುಹೋದನು. ಅನಂತರ ಸ್ವಾಮಿಗಳು ಅವನ ಮೇಲೆ ಕರುಣೆ ಹೊಂದಿ ಅವನನ್ನು ತಮ್ಮ ತೀರ್ಥ ಪ್ರೋಕ್ಷಣೆಯಿಂದ ಬದುಕಿಸಿದರು. ಅವನು ಕೃತಜ್ಞತೆಯಿಂದ ಅವರ ಪಾದಗಳಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದನು ಆ ವಿರೋಧಿಗಳು ಇವರ ಈ ಪವಾಡವನ್ನು ನೋಡಿ ಆಶ್ಚರ್ಯ ಹೊಂದಿ ತಾವು ಸುಳ್ಳು ಹೇಳಿದುದಕ್ಕಾಗಿ ಸ್ವಾಮಿಗಳ ಕ್ಷಮಾಪಣೆಯನ್ನು ಬೇಡಿದರು

ಈ ರೀತಿ ಸ್ವಾಮಿಗಳು ಅನೇಕ ಪವಾಡಗಳನ್ನು ನಡೆಸುತ್ತಿದ್ದರು. ಒಮ್ಮೆ ಬಿಸಲಿನಲ್ಲಿ ನೀರು ನೆರಳಿಲ್ಲದ ಒಂದು ಜಾಗದಲ್ಲಿ ಇವರ ಸೇವಕನ ಹೆಂಡತಿಗೆ ಪ್ರಸವವೇದನೆಯುಂಟಾಗಿ ಅವಳು ಬಹಳ ಕಷ್ಟಪಡುತ್ತಿರಲು ಸ್ವಾಮಿಗಳು ತಮ್ಮ ಪವಾಡ ಶಕ್ತಿಯಿಂದ ಆ ಜಾಗದಲ್ಲಿ ನೀರನ್ನು ನೆರಳನ್ನೂ ಉಂಟುಮಾಡಿ ಅವಳನ್ನು ಕಾಪಾಡಿದರು. ಒಂದು ಸಲ ಅವರ ಬ್ರಾಹ್ಮಣಶಿಷ್ಯನೊಬ್ಬನು ತಾನು ಮದುವೆ ಮಾಡಿಕೊಳ್ಳಲು ಹಳ್ಳಿಗೆ ಹೋಗುತ್ತಿರುವುದಾಗಿಯೂ ತಮಗೆ ಅವರು ಸ್ವಲ್ಪ ಧನಸಹಾಯ ಮಾಡಬೇಕೆಂದು ಪ್ರಾರ್ಥಿಸಿದನು ಆಗ ಅವರು ಒಂದು ಬಟ್ಟೆಯಲ್ಲಿ ಸ್ವಲ್ಪ ಮಂತ್ರಪೂರಿತವಾದ ಮೃತ್ತಿಕೆ(ಮಣ್ಣು) ಯನ್ನು ಕಟ್ಟಿಕೊಟ್ಟರು. ದಾರಿಯಲ್ಲಿ ಅವರು ಒಬ್ಬ ದೇಸಾಯಿಯ ಮನೆಯ ಜಗಲಿಯ ಮೇಲೆ ಕೂತಿರಲು ಒಂದು ಭೂತವು ಆ ದೇಸಾಯಿಯ ಮಗನನ್ನು ಬಲಿತೆಗೆದುಕೊಳ್ಳಲು ಬಂದಿತು. ಆಗ ಇವನು ತನ್ನ ಬಟ್ಟೆಯ ಗಂಟಿನಲ್ಲಿದ್ದ ಮೃತ್ತಿಕೆಯನ್ನು ಆ ಭೂತದ ಮೇಲೆ ಎರಚಲು ಅದು ಸುಟ್ಟು ಭಸ್ಮವಾಯಿತು. ಈ ವಿಷಯವನ್ನೆಲ್ಲಾ ಅನಂತರ ಅರಿತ ದೇಸಾಯಿಯು ಇವನು ತನ್ನ ಮಗುವಿನ ರಕ್ಷಣೆ ಮಾಡಿದುದಕ್ಕಾಗಿ ಸಂತೋಷಪಟ್ಟು ಕೃತಜ್ಞತೆಯಿಂದ ಅವನಿಗೆ ತನ್ನ ಆಸ್ತಿಯನ್ನೆಲ್ಲಾ ದಾನಮಾಡಿ ಅವನಿಗೆ ತನ್ನ ಅಣ್ಣನ ಮಗಳನ್ನೂ ಮದುವೆ ಮಾಡಿಕೊಟ್ಟನು. ಸೇವಕನಾದ ಬ್ರಾಹ್ಮಣನು ಸ್ವಾಮಿಗಳ ಮೃತ್ತಿಕಾ ಪ್ರಭಾವದ ಪವಾಡದಿಂದ ದೇಸಾಯಿಯಾದನು

ತಮ್ಮ ಪೂರ್ವ ಪರಿಚಿತನಾದ ದಿವಾನನಾದ ವೆಂಕಣ್ಣನನ್ನು ಸ್ವಾಮಿಗಳು ನೋಡಲು ಅದವಾನಿಗೆ ಹೋದಾಗ ಅವನ ನವಾಬನಾದ ಅಸದುಲ್ಲಾಖಾನನೆಂಬುವನು ಇವರನ್ನು ಪರೀಕ್ಷಿಸಲು ಇವರ ಮನೆಗೆ ಬಂದನು. ಆಗ ಒಂದು ತಟ್ಟೆಯ ತುಂಬ ಮಾಂಸವನ್ನು ಇವರಿಗೆ ಕಾಣಿಕೆಯಾಗಿ ತಂದು ಮೇಲೆ ಬಟ್ಟೆಯನ್ನು ಹೊದಿಸಿ ಇವರ ಮುಂದೆ ಇಟ್ಟನು. ಅವನ ಕೃತ್ರಿಮವನ್ನು ಅರಿತ ಸ್ವಾಮಿಗಳು ಆ ತಟ್ಟೆಯ ಹೊದಿಕೆಯ ಮೇಲೆ

ತಮ್ಮ ಕಮಂಡಲದ ತೀರ್ಥವನ್ನು ಪ್ರೋಕ್ಷಿಸಲು ಅವರ ಪವಾಡದಿಂದ ಒಳಗಿದ್ದುದೆಲ್ಲವೂ ಫಲ ಪುಷ್ಪಗಳಾದುವು. ಅನಂತರ ಮೇಲುಹೊದಿಕೆಯನ್ನು ತೆಗೆದು ನೋಡಿದ ನವಾಬನು ಬಹಳ ಆಶ್ಚರ್ಯಭರಿತನಾದನು. ಅನಂತರ ಅವನಿಗೆ ತನ್ನ ತಪ್ಪಿನ ಅರಿವಾಗಿ ಅವರಿಗೆ ಬಗ್ಗಿ ಸಲಾಂ ಮಾಡಿ ಅವರನ್ನು ಕ್ಷಮಾಪಣೆಯನ್ನು ಕೇಳಿಕೊಂಡನು. ಸ್ವಾಮಿಗಳು ಅವನಿಗೆ ಆ ಫಲಪುಷ್ಪಗಳನ್ನೂ, ಒಂದು ಜೋಡಿ ಶಾಲುವನ್ನೂ ಕೊಟ್ಟು ಮರ್ಯಾದೆ ಮಾಡಿದರು. ಅವರ ಕ್ಷಮಾಗುಣಕ್ಕೆ ಮನಸೋತ ಅಸದುಲ್ಲಾಖಾನನು ಅವರಿಗೆ ಆ ದಿವಾನಿಯನ್ನೇ ಇನಾಮಾಗಿಕೊಡುವುದಾಗಿ ಹೇಳಿದನು. ಆದರೆ ಸ್ವಾಮಿಗಳು ತಮಗೆ ಮಂಚಾಲೆಯನ್ನು ಮಾತ್ರ ಕೊಟ್ಟರೆ ಸಾಕೆಂದು ಹೇಳಿದರು. ಅನಂತರ ಮಂಚಾಲೆಯಲ್ಲಿ ರಾಜನ ಖರ್ಚಿನಿಂದಲೇ ರಾಘವೇಂದ್ರಮಠವು ಕಟ್ಟಲ್ಪಟ್ಟಿತು.

ಸ್ವಾಮಿಗಳು ತಮ್ಮ ಮಂತ್ರಾಕ್ಷತೆಯ ಪ್ರಭಾವದಿಂದ ದೊಡ್ಡ ದೊಡ್ಡ ವೈದ್ಯರು ಕೈಬಿಟ್ಟ ರೋಗಿಗಳ ಕಾಯಿಲೆಗಳನ್ನೆಲ್ಲಾ ವಾಸಿಮಾಡುತ್ತಿದ್ದರು. ಮಕ್ಕಳಿಲ್ಲದೆ ಕೊರಗುತ್ತಿದ್ದ ದಂಪತಿಗಳು ಇವರ ಅನುಗ್ರಹದಿಂದ ಮಕ್ಕಳನ್ನು ಪಡೆದರು. ಹೆಳವರಾಗಿದ್ದವರು ಇವರ ಅನುಗ್ರಹದಿಂದ ನಡೆಯುವಂತೆ ಆದರು. ಒಟ್ಟಿನಲ್ಲಿ ಅವರ ದಯೆಯಿಂದ ಪ್ರಾರ್ಥಿಸಿದವರಿಗೆಲ್ಲಾ ಅವರ ಆಸೆಗಳೆಲ್ಲಾ ನೆರವೇರಿದುವು. ರಾಘವೇಂದ್ರಸ್ವಾಮಿಗಳು ಮಂಚಾಲೆಗೆ ಹೋಗಿ ಸೇರಿದೊಡನೆಯೇ ತಮ್ಮ ಕುಲದೇವಿಯಾದ ಮಂಚಾಲಮ್ಮನನ್ನು ದರ್ಶಿಸಲು ಹೋಗಿ ಆ ದೇವಿಯನ್ನು ತಾವು ಬೃಂದಾವನದಲ್ಲಿದ್ದು ಭಕ್ತರ ಕೋರಿಕೆಗಳನ್ನು ನೆರವೇರಿಸಿ ಕೀರ್ತಿವಂತರಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ಅವರ ಇಷ್ಟದಂತೆಯೇ ದೇವಿಯು ಅವರು ಬೃಂದಾವನದಲ್ಲಿಯೇ ಇದ್ದು ಭಕ್ತರ ಕೋರಿಕೆಗಳನ್ನು ನೆರವೇರಿಸಿ ಕೀರ್ತಿವಂತರಾಗುವಂತೆ ಆಶೀರ್ವದಿಸಿದಳು.

ಒಮ್ಮೆ ಸ್ವಾಮಿಗಳು ಶಿಷ್ಯರಿಗೆ ಉಪದೇಶಿಸುತ್ತಿರುವಾಗ ಕೃಷ್ಣದ್ವೈಪಾಯನ ಸ್ವಾಮಿಗಳು ಅರ್ಚಿರಾದಿ ಮಾರ್ಗದಲ್ಲಿ ಹೋಗುತ್ತಿರುವುದನ್ನು ತಮ್ಮ ಜ್ಞಾನದೃಷ್ಟಿಯಿಂದ ಅರಿತು ಅವರನ್ನು ತಮ್ಮದು ಯಾವಾಗ ಎಂದು ಕೇಳಲು ಅವರು ಎರಡು ವರ್ಷ, ಎರಡು ತಿಂಗಳು, ಎರಡು ದಿನವೆಂದು ಹೇಳಿದರಂತೆ. ಇದನ್ನು ಅವರು ಅವರ ಶಿಷ್ಯರಿಗೆ ತಿಳಿಸಿದರು. ರಾಘವೇಂದ್ರಸ್ವಾಮಿಗಳು ತಮ್ಮ ಕರ್ತವ್ಯ ಪಾಲನೆಗೋಸ್ಕರ ಪ್ರಪಂಚದಲ್ಲಿ ಜೀವಿಸಿದ್ದರು. ಅವರು ಕಾಯಿಲೆಯಿಂದಲಾಗಲೀ, ಸಾವಿನಿಂದಲಾಗಲೀ ಅವರ ದೇಹವನ್ನು ತ್ಯಜಿಸಲಿಲ್ಲ. ಸ್ವಲ್ಪ ಕಾಲವಾದಮೇಲೆ ಅವರಿಗೆ ತಾವು ಪ್ರಪಂಚದಲ್ಲಿ ಮಾಡಬೇಕಾದ ಕರ್ತವ್ಯಗಳೆಲ್ಲವೂ ಮುಗಿದು ತಾವು ತೆರಳುವ ಕಾಲವು ಬಂದಿತೆಂದು ಅರಿತುಕೊಂಡರು. ತಮ್ಮ ಮಠದ ಮುಂದಿನ ರಾಜ್ಯಭಾರಕ್ಕೆ ಯೋಗೀಂದ್ರರನ್ನು ನಿಯಮಿಸಿದರು. ಅವರು ತುಂಗಭದ್ರೆಯ ದಡದಲ್ಲಿ ಒಂದು ಬೃಂದಾವನವನ್ನು ಕಟ್ಟಿಸಿ ಅದರಲ್ಲಿ ೭00 ಸಾಲಿಗ್ರಾಮಗಳನ್ನು ಶೇಖರಿಸಿ ಇಡಿಸಿದರು. ಅಷ್ಟದಿಕ್ಕುಗಳಲ್ಲಿಯೂ ದೇವತಾ ಮೂರ್ತಿಗಳನ್ನು ಸ್ಥಾಪಿಸಿದರು. ಒಂದು ಶುಭ ದಿನವನ್ನು ಆರಿಸಿ ಬೃಂದಾವನ ಪ್ರವೇಶಕ್ಕೆ ಸಿದ್ಧತೆ ಮಾಡಿಕೊಂಡು ತಮ್ಮ ಶಿಷ್ಯರಿಗೆಲ್ಲಾ ತಾವು ಅವರುಗಳನ್ನು ಅಗಲುವ ವಿಷಯವನ್ನು ತಿಳಿದರು. ಇದನ್ನು ಕೇಳಿದ ಅವರ ಶಿಷ್ಯರು ವ್ಯಸನಾಕ್ರಾಂತರಾಗಿ ಅವರಿಗೆ ಕೈಜೋಡಿಸಿ ಅವರ ನಿರ್ಧಾರವನ್ನು ಬದಲಾಯಿಸುವಂತೆ ಪ್ರಾರ್ಥಿಸಿಕೊಂಡರು. ಆದರೆ ಅದಕ್ಕೆ ಸ್ವಾಮಿಗಳು, ಯಾರೂ ಅವರ ಅಗಲಿಕೆಗೆ ವ್ಯಸನ ಪಡಕೂಡದೆಂದೂ, ತಾವು ಶಾರೀರಿಕವಾಗಿ ಅವರ ಮಧ್ಯೆ ಇಲ್ಲದಿದ್ದರೂ ಇನ್ನೂ ನಾಲ್ಕು ನೂರು ವರ್ಷಗಳ ಕಾಲ ಬೃಂದಾವನದಲ್ಲಿ ಅವರ ಸನ್ನಿಧಿ ಅವರುಗಳ ಹತ್ತಿರವೇ ಇದ್ದು ಅವರಿಗೆ ಮಾರ್ಗದರ್ಶನ ಮಾಡುತ್ತದೆ ಎಂದು ಹೇಳಿದರು. ಅನಂತರ ಶ್ರಾವಣ ಬಹುಳ ದ್ವಿತೀಯೆ ಗುರುವಾರ ಸಕಲ ರಾಜಮರ್ಯಾದೆಯಿಂದ ವೇದಘೋಷಗಳು ಆಗುತ್ತಿದ್ದಂತೆಯೇ ಭಕ್ತಾಗ್ರಣಿಯಾದ ಮಾರುತಿಯನ್ನು ಧ್ಯಾನಿಸುತ್ತಾ ಕೈಯಲ್ಲಿ ಜಪಮಣಿ ಸರವನ್ನು ಹಿಡಿದುಕೊಂಡು ಶ್ರೀ ರಾಘವೇಂದ್ರ ಶ್ರೀಪಾದಂಗಳವರು ಬೃಂದಾವನದಲ್ಲಿ ಕುಳಿತು ಸಮಾಧಿಸ್ಥರಾದರು. ಕೆಲವು ನಿಮಿಷಗಳಲ್ಲಿಯೇ ಜಪಮಣಿಯು ಅವರ ಕೈಯಿಂದ ಬಿದ್ದು ಅವರು ಭಗವಂತನ ಪಾದಾರವಿಂದವನ್ನು ಸೇರಿದರು.

ಸ್ವಾಮಿಗಳು ಹೇಳಿದ ಮಾತಿನಂತೆ ಇಂದಿಗೂ ಅವರು ತಮ್ಮ ಇರುವಿಕೆಯನ್ನು ಅವರ ಭಕ್ತರು ಅನುಭವಿಸುವಂತೆ ಮಾಡುತ್ತಾರೆ. ಇಂದಿಗೂ ಅವರ ಅನೇಕ ಭಕ್ತರುಗಳು ಅವರು ಬೃಂದಾವನದ ಹತ್ತಿರ ಬೆಳಗಿನ ಜಾವದಲ್ಲಿ ಓಡಾಡುವ ಶಬ್ದವನ್ನೂ, ಅವರ ಪಾದುಕೆಗಳ ಸದ್ದನ್ನೂ ಕೇಳಿಸಿಕೊಂಡಿರುವುದಾಗಿ ಹೇಳುತ್ತಾರೆ. ಅಲ್ಲದೆ ಅವರ ಭಕ್ತರುಗಳು ತಮ್ಮ ಹಾಸಿಗೆಯ ಮೇಲೆ ಮಂತ್ರಾಕ್ಷತೆ, ಹೂವು ಎಲ್ಲ ಬಿದ್ದಿರುವುದನ್ನೂ, ತಮ್ಮ ಪೂಜಾಕೊಠಡಿಗಳಲ್ಲಿ ತೆಂಗಿನಕಾಯಿಯ ಹೋಳು, ಫಲಗಳು ಇರುವುದನ್ನೂ ಈಗಲೂ ನೋಡಿರುವುದಾಗಿ ಹೇಳುತ್ತಾರೆ. ಸ್ವಾಮಿಗಳು ತಮ್ಮ ಭಕ್ತರಿಗೆ ಕನಸಿನಲ್ಲಿ ಕಾಣಿಸಿಕೊಂಡು ನಿರ್ಭಯರಾಗಿ ಇರುವಂತೆ ಹೇಳುತ್ತಾರೆ. ಇಂಡಿಯಾ ದೇಶದ ಮಂತ್ರಾಲಯದ ಹತ್ತಿರ ಮಾತ್ರವಲ್ಲದೆ ವಿಶ್ವದಾದ್ಯಂತವೂ ಅವರಿಗೆ ಶರಣಾಗತರಾದವರಿಗೆ ಅವರ ಕೃಪೆಯು ಇರುವುದಾಗಿ ತಿಳಿದು ಬರುತ್ತದೆ. ಸ್ವಾಮಿಗಳ ದಯೆಯನ್ನು ಪಡೆಯಲು ಲಿಂಗಬೇಧ, ಜಾತಿಮತ, ವಯಸ್ಸು, ಜಾಗ ಮುಂತಾದ ಯಾವ ಕಡೆಯೂ ಇಲ್ಲ. ಆದರೆ ಅವರ ದಯೆಯನ್ನು ಪಡೆಯಲು ಭಕ್ತಿಯಿಂದ ಕೂಡಿದ ಪರಿಶುದ್ಧವಾದ ಹೃದಯವಿರಬೇಕು. ಸ್ವಾಮಿಗಳು "ಗುರುರಾಜ"ರೆಂದೂ, "ಗುರುಸಾರ್ವಭೌಮ" ರೆಂದು ಕರೆಯಲ್ಪಡುತ್ತಿದ್ದರು. ಅವರನ್ನು "ಕಲ್ಪವೃಕ್ಷ"ವೆಂದೂ ಕರೆಯುತ್ತಿದ್ದರು.

ರಾಘವೇಂದ್ರ ಸ್ವಾಮಿಗಳು ಅವರ ಜೀವಿತ ಕಾಲದಲ್ಲಿ ಮಾಡಿರುವ ಪವಾಡಗಳಿಗೆ ಲೆಕ್ಕವೇ ಇಲ್ಲ. ಇಂದಿಗೂ ಯಾತ್ರಿಕರು ಮುದುಕರಾಗಲೀ, ಚಿಕ್ಕವರಾಗಲೀ, ಕಾಯಿಲೆಯವರಾಗಲೀ, ಬಡವರಾಗಲೀ, ಬಲ್ಲಿದವರಾಗಲೀ, ಬಲ್ಲದವರಾಗಲೀ ಗುಂಪು ಗುಂಪಾಗಿ ಹೋಗಿ ಸ್ತೋತ್ರಗಳನ್ನು ಹೇಳುತ್ತಾ ಅವರ ಬೃಂದಾವನವನ್ನು ಪ್ರದಕ್ಷಿಣೆ ಮಾಡುತ್ತಾ, ಅದರ ಸುತ್ತ ಉರುಳುಸೇವೆ ಮಾಡುತ್ತ ಅವರ ಕೃಪೆಗೆ ಪಾತ್ರರಾಗಿರುತ್ತಾರೆ. ಸ್ವಾಮಿಗಳೇ ಕರೆಯುತ್ತಾರೋ ಎನ್ನುವಂತೆ ಸಾವಿರಾರು ಜನರು ಇಂದಿಗೂ ಮಂತ್ರಾಲಯದಲ್ಲಿ ಯಾವಾಗಲೂ ತುಂಬಿರುತ್ತಾರೆ. ಇವೆಲ್ಲವುಗಳಿಂದಲೂ ನಾವು ಸ್ವಾಮಿಗಳ ಮಹಿಮೆಯನು ಅರಿಯಬಹುದು.

ಶ್ರೀ ರಾಘವೇಂದ್ರಾಯ ನಮಃ



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಆಲಯದ ಶಾಸನಗಳು

ಆಂಗ್ಲ ಮೂಲ - ಡಾ|| ಎನ್. ರಮೇಶನ್.

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರೆದಿದೆ)

### ವಿಜಯನಗರದ ಕಾಲದಲ್ಲಿ ಆಲಯ

ವಿಜಯನಗರದರಸರ ಪೂರ್ಣ ಆಶ್ರಯದಿಂದಾಗಿ ತಿರುಮಲೆಯ ಆಲಯವು ಪ್ರಸಿದ್ಧಿಯ ಪರಕಾಷ್ಠತೆಯನ್ನು ತಲುಪಿತು. ಶ್ರೀಕೃಷ್ಣದೇವರಾಯ ಹಾಗೂ ಅಚ್ಯುತರಾಯರು ಆಲಯಕ್ಕೆ ಹಲವಾರು ಬಾರಿ ತೀರ್ಥಯಾತ್ರೆಯನ್ನು ನಡೆಸಿ ಸ್ವಾಮಿಗೆ ಅನರ್ಘ್ಯವಾದ ಅಮೂಲ್ಯವಾದ ಮುತ್ತು ರತ್ನಗಳ ಆಭರಣಗಳನ್ನು ಸಮರ್ಪಿಸಿ, ಇಲ್ಲಿನ ಉತ್ಸವ ಪೂಜೆಗಳನ್ನು ವೈಭವೋಪೇತವಾಗಿ ಆಚರಿಸಲು ಬೇಕಾದ ಸಾಹಿತ್ಯವನ್ನು ಒದಗಿಸಿದರು. ಅಚ್ಯುತ ರಾಯನಂತೂ ತಿರುಮಲೆಯ ಸ್ವಾಮಿ ಸನ್ನಿಧಿಯಲ್ಲಿಯೇ ಪಟ್ಟಾಭಿಷಿಕ್ತನಾದ. ಹೀಗಾಗಿ ವಿಜಯನಗರ ಸಾಮ್ರಾಜ್ಯದ ಉಗಮ ವಿಕಾಸ ಪತನಗಳೂ, ಇಲ್ಲಿನ ನಾಲ್ಕು ರಾಜವಂಶಗಳ ಉನ್ನತಿ ಅವನತಿಗಳೂ, ಆಲಯದ ಅಭಿವೃದ್ಧಿ, ಅದೃಷ್ಟ, ಅಲಂಕಾರಗಳ ಮೇಲೆ ತಮ್ಮ ಪ್ರಭಾವವನ್ನು ಬೀರಿದವು.

ಹದಿಮೂರನೆಯ ಶತಮಾನದ ತನಕ, ತಿರುಮಲೆಯ ಆಲಯದ ಬಹುತೇಕ ದಾನದತ್ತಿಗಳು (ಹಲ ಕೆಲವು ಪೂರ್ವ ಸಮುದ್ರ ತೀರದವುಗಳ ಹೊರತು) ಆಲಯದ ದಕ್ಷಿಣಾದಿ ರಾಜ್ಯಗಳಿಂದ, ಅಲ್ಲಿನ ರಾಜಪುರುಷರ, ಶ್ರೀ ಸಾಮಾನ್ಯರ, ದೇಣಿಗೆಗಳಾಗಿದ್ದವು. ಪೂರ್ವತೀರದವರಲ್ಲಿ ಮೊತ್ತ ಮೊದಲಿಗೆ ಆಲಯಕ್ಕೆ ದೇಣಿಗೆಯನ್ನು ನೀಡಿದವರೆಂದರೆ ಹದಿನಾಲ್ಕನೆಯ ಶತಮಾನದಲ್ಲಿ ವೀರ ಕಂಪಣನ ಸೈನ್ಯಾಧಿಪತಿಯಾಗಿದ್ದ ಸಿಂಗಯ ದಂಡನಾಯಕ. ಆತ ಅದುವರೆಗೆ ತಿರುಮಲೆಯ ಆಲಯದ ಜೀಯರುಗಳ ಉಸ್ತುವಾರಿಗೆ ಅರಸಿನಾಲಯಂ, ನಂದನವನಗಳನ್ನೂ, ಇತರ ದಾನಗಳನ್ನೂ ಒಪ್ಪಿಸಿದ ಎಂದು ಶಾಸನಗಳಿಂದ ತಿಳಿದುಬರುತ್ತದೆ. ತಾನು ದಕ್ಷಿಣದ ಮುಸಲ್ಮಾನ ಧಾಳಿಗಳ ವಿರುದ್ಧ ಕಾರ್ಯಾಚರಣೆಯಲ್ಲಿ ತೊಡಗಿದ್ದದ್ದರಿಂದ ಪ್ರಾಯಶಃ ಈ ರೀತಿ ಮಾಡಬೇಕಾ[illegible]ಎಹುದು. ವೀರಕಂಪಣನೂ, ಸಾ[illegible] ಮಂಗಿದೇವನೂ ಈ ಮುಸಲ್ಮಾನ ಆಕ್ರಮಣಗಳನ್ನು ತಡೆಯುವಲ್ಲಿ ನಿರತರಾಗಿದ್ದರು.

ಹೀಗೆ ಸಿಂಗಯ ದಂಡನಾಯಕನು ಈ ಭಾಗದಲ್ಲಿ ಒಬ್ಬ ಸೇನಾಧಿಪತಿಯಂತೆ ಕಂಡುಬಂದು ತಿರುಮಲೆಯಲ್ಲಿ ಎರಡು ಮಠಗಳನ್ನು ಸ್ಥಾಪಿಸಿ ಅಲ್ಲಿನ ಜೀಯರುಗಳಿಗೆ ಆಲಯದ ಉತ್ಸವ ಪೂಜಾದಿಗಳ ನಿರ್ವಹಣೆಗೆ ತಕ್ಕ ಆಸ್ತಿಗಳನ್ನು ನಂದನವನಗಳನ್ನು ಒಪ್ಪಿಸಿದ.

ಇದೇ ಕಾಲದಲ್ಲಿ - ಎಂದರೆ ಬುಕ್ಕರಾಯನ ಕಾಲದಲ್ಲಿ ಆಲಯದಲ್ಲಿ ಪ್ರತಿದಿನವೂ ಬುಕ್ಕರಾಯನ ಸಂಧಿಯನ್ನು ಏರ್ಪಡಿಸಿ ಒಂದು ತಿರುಪ್ಪಾನಕ ನೈವೇದ್ಯದ ಏರ್ಪಾಡು ಮಾಡಲೂ, ಬ್ರಹ್ಮೋತ್ಸವ ನಡೆಸಲೂ ಬುಕ್ಕರಾಯನು ದಾನ ನೀಡಿದನೆಂದು ಶಾಸನಗಳು ತಿಳಿಸುತ್ತವೆ. ಮಹಾಮಂಡಲೇಶ್ವರ ಮಂಗಿದೇವನು ಆಲಯದ ಗರ್ಭಗುಡಿಯ ಮೇಲಿನ ವಿಮಾನಶಿಖರಕ್ಕೆ ಬಂಗಾರದ ಮುಲಾಮು ಹಚ್ಚಿದ ತಾಮ್ರದ ತಗಡನ್ನು ಹೊದಿಸಿ ಮಹತ್ಕಾರ್ಯ ಮಾಡಿದ. 'ತಿರುಮಲದೇವನ ವಿಮಾನದಲ್ಲಿ ಬಂಗಾರದ ಶಿಖರವನ್ನು ಕೀರ್ತಿಶಾಲಿಯಾದ ಮಂಗಿದೇವ ಮಹಾರಾಜನು (ಕ್ರಿ.ಶ. 1359) ಶಕ 1281 ರ ವಿಕಾರಿ ಸಂವತ್ಸರ ಆಷಾಢಮಾಸ ಶುಕ್ಲಪಕ್ಷದ ಶನಿವಾರ ದಶಮಿಯಂದು ಪ್ರತಿಷ್ಠಾಪಿಸಿದನೆಂದು ತಿ. ತಿ. 237 ನೇ ಶಾಸನವು ತಿಳಿಸುತ್ತದೆ. ಯಾವುದೇ ರಾಜನ ರಾಜಕೀಯ ಆಡಳಿತದ ವರ್ಣವನ್ನಿಲ್ಲಿ ಸೂಚಿಸಲಾಗಿಲ್ಲವೆಂಬುದು ಗಮನಾರ್ಹ. ಹೀಗಾಗಿ ಅಂದಿನ ದೇಶದ ರಾಜ



ಕೀಯ ರಂಗ ಪರಿವರ್ತನೆಯ ಸಂಧಿಕಾಲದಲ್ಲಿ ಇದ್ದಿತೆಂದು ಹೇಳಬಹುದಾಗಿದೆ.

ಈ ದಾನಗಳ ಹಿನ್ನೆಲೆಯಲ್ಲಿ ಕ್ರಿಶ 1387 ರಲ್ಲಿ ಹರಿಹರ ರಾಯನ ಶ್ರೀ ಕಾರ್ಯನಿರ್ವಾಹಕನಾಗಿ ಮುಲ್ಲೈ ತಿರುವೆಂಕಟ ಜೀಯರು ಮಾಸಿ ತಿಂಗಳಿನ ಮಾಸಿ ಉತ್ಸವವನ್ನು ಪ್ರವೇಶಗೊಳಿಸಿದುದನ್ನು ಕಾಣಬಹುದು. ತಿರುಮಲೆಯ ಆಲಯದಲ್ಲಿನ ವರದರಾಜಸ್ವಾಮಿ ಗುಡಿಯಲ್ಲಿನ ತಿ ತಿ 103 ನೇ ಶಾಸನದಂತೆ ಪೊಂಗೋಡು ಗ್ರಾಮದ ಆದಾಯದಲ್ಲಿ 100 ಪಣವನ್ನು ಹರಿಹರ ರಾಯನ ಹೆಸರಿನಲ್ಲಿ ಮುಲ್ಲೈ ತಿರುವೆಂಕಟ ಜೀಯರು ಆಲಯದ ಶ್ರೀ ಭಂಡಾರಕ್ಕೆ ಪ್ರಭವ ನಾಮ ಸಂವತ್ಸರದಲ್ಲಿ ಒಪ್ಪಿಸಿ ಉತ್ಸವವನ್ನು ಆರಂಭಿಸಿದನೆಂದು ಹೇಳಲಾಗಿದೆ. ಆಲಯ ಲೆಕ್ಕಾಧಿಕಾರಿಯಾದ ತಿರುನಿನ್ರ ಊರ್ ಉಡೆಯನ್ ಅನ್ನು ಈ ಶಾಸನದಲ್ಲಿ ನೋಡಬಹುದು. ದಾನ ದತ್ತಿಗಳನ್ನು ನೀಡುವುದಾಗಿದ್ದರೂ ಆಲಯದ ಪರವಾಗಿ ಈ ದಾನಗಳನ್ನು ಯಾರು ಸ್ವೀಕರಿಸಿದರೆಂಬುದನ್ನು ಉಲ್ಲೇಖಿಸಲಾಗಿಲ್ಲ. ಜೊತೆಗೇ ಇವುಗಳ ಉತ್ಸವಾಚರಣೆಯ ಹೊಣೆಯು ಯಾರಿಗೆ ಸೇರಿದ್ದಿತೆಂಬುದರ ಬಗ್ಗೆ ತಿಳಿಸಲಾಗಿಲ್ಲ

ಹೀಗೆ ಸರಿ ಸುಮಾರು ಕ್ರಿಶ. 1390 ರ ಹೊತ್ತಿಗೆ ತಿರುಮಲೆಯ ಆಲಯದ ಶಾಸನಗಳಲ್ಲಿಯಂತೆ ಪ್ರಾಕ್ ವಿಜಯನಗರ ಕಾಲದ ಆಲಯ ಮೊಕ್ತೇಸರರು - ಆ ವರೆಗೆ ಆಲಯದ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದವರು - ಆಡಳಿತದಲ್ಲಿ ತಮ್ಮ ಹಿಡಿತವನ್ನು ಕಳೆದುಕೊಳ್ಳುವಂತಾಗಿ, ಮೇಲೆ ಹೇಳಿದ ಶಾಸನದಂತೆ ಉಲ್ಲೇಖವನ್ನೇ ಪಡೆಯದೆ ಹಿಂದೆ ಬಿದ್ದರು. ಮೇಲೆ ಹೇಳಿದ ಶಾಸನದಲ್ಲಿ - ತಿರುನಿನ್ರ ಊರ ಉಡೈಯನ್ - ಆಲಯ ಲೆಖ್ಖಾಧಿಕಾರಿ ಮಾತ್ರವೇ ಎರಡೂ ದಾನಗಳ ದಾಖಲೆಗಳನ್ನು ಸೃಷ್ಟಿಸಿದವನೆಂದು ಖಚಿತವಾಗಿ ತಿಳಿಸಲಾಗಿದೆ, ಹೊರತು ಸ್ಥಾನತ್ತಾರರ ನಾಮಮಾತ್ರವೂ ಇಲ್ಲ. ಇದರಿಂದಾಗಿ ಒಂದು ಆಸಕ್ತಿಕಾರಕ ಅಂಶವನ್ನು ಗುರುತಿಸಬಹುದು. ಈ ಕಾಲಕ್ಕೆ ಆಗಲೇ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಆಗಿದ್ದರೂ, ತಿರುಮಲೆಯ ಆಲಯದ ಬಗ್ಗೆಯಾಗಲೀ, ಅಲ್ಲಿನ ಭಕ್ತರಲ್ಲಿ, ಆಡಳಿತಗಾರರಲ್ಲಿಯಾಗಲೀ ಸಾಮ್ರಾಜ್ಯದ ಅಧಿಕಾರ ಇನ್ನೂ ವ್ಯಾಪಕವಾಗಿ ತಳವೂರಿರಲಿಲ್ಲ. ಇದರಿಂದಾಗಿಯೇ 1380 ರ ವರೆಗಿನ ಶಾಸನಗಳಲ್ಲಿಯೂ ವಿಜಯನಗರದ ಸಾಮ್ರಾಟರ ಆಡಳಿತಾರೂಢ ರಾಜರ ಪ್ರಶಸ್ತಿ ಕಂಡುಬರುವುದಿಲ್ಲ.

ತಿ ತಿ. 57 ನೇ ಮುಲ್ಲೈ ತಿರುವೆಂಕಟ ಜೀಯರ ಶಾಸನದಂತೆ ಶಕವರ್ಷ 1312 ಎಂದರೆ ಕ್ರಿ.ಶ. 1390 ರ ವೇಳೆಗೆ ಆಲಯದ ಪ್ರಸಾದವನ್ನು ತಿರುಪತಿ ಶ್ರೀವೈಷ್ಣವರು, ತಿರುಚಾನೂರು ಸಭೆಯವರು, ನಂಬಿಮಾರ್ (ಆಲಯ ಅರ್ಚಕರು) ಕೋಯಿಲ್ ಕೆಲ್ವಿ ಜೆಯರ್, ಇಬ್ಬರು ಆಲಯ ಲೆಕ್ಕಿಗರು - ಇವರಲ್ಲಿ ವಿತರಣೆಯಾಗುತ್ತಿತ್ತು. ಪ್ರಸಾದವನ್ನು ಹನ್ನೆರಡು ಭಾಗವನ್ನಾಗಿ ಮಾಡಿ ಖಚಿತವಾದ ಪ್ರಮಾಣದಲ್ಲಿ ವಿತರಣೆಯಾಗುತ್ತಿತ್ತು ಹೀಗಾಗಿ ಹತ್ತು ಮಂದಿ ಸ್ಥಾನತ್ತಾರರೂ, ಇಬ್ಬರು ಆಲಯ ಲೆಕ್ಕಿಗರೂ - ಸೇರಿ ಒಟ್ಟು ಹನ್ನೆರಡು ಮಂದಿ ಆಲಯದ ಪಾರುಪತ್ಯವನ್ನು ಮಾಡುತ್ತಿದ್ದರೆಂದು ತೋರುತ್ತದೆ. ಇಲ್ಲಿ ಹೇಳಲಾದ ಏಕಾಕಿ ಶ್ರೀವೈಷ್ಣವರು ಮೊದಲಿಗೆ ರಾಮಾನುಜರಿಂದ ಸ್ವಾಮಿಸೇವೆಯಲ್ಲಿ ನಿಯುಕ್ತರಾಗಿದ್ದಿರಬೇಕು. ಇವರ ಸಂಖ್ಯೆ ರಾಮಾನುಜರ ಕಾಲದಲ್ಲಿ ಒಂದೇ ಆಗಿದ್ದು, ಮೂರು ಶತಮಾನಗಳ ಒಳಗೆ ನಾಲ್ಕು ಆಯಿತು ಕ್ರಿ.ಶ. 1398 ರ ವೇಳೆಗೆ ಹತ್ತು ಆಯಿತು ಈ ವೈಷ್ಣವರು ಆಲಯದ ಧಾರ್ಮಿಕ ವಿಧಿಗಳಾದ ಅರ್ಚನೆ, ನಿವೇದನೆ, ಪೂಜೆ ಪುರಸ್ಕಾರಗಳನ್ನು ನೋಡಿಕೊಳ್ಳುತ್ತ ಜೊತೆಗೆ ಆಲಯದ ದಾನ ದತ್ತಿಗಳ ಆಡಳಿತ ನಿರ್ವಹಣೆಯನ್ನೂ ನೋಡುವವರಾಗಿದ್ದರು ರಾಮಾನುಜರು ಮೂಲಕ ತಮ್ಮ ಪರಂಪರೆಯನ್ನು ಗುರುತಿಸಿಕೊಂಡ ಈ ಶ್ರೀವೈಷ್ಣವ ಸಂತಾನರೇ ಇಂದಿಗೂ ಶ್ರೀ ವೆಂಕಟೇಶ್ವರಸ್ವಾಮಿಯ ಆರಾಧನೆಯಲ್ಲಿ ತೊಡಗಿದ್ದು ಸಾವಿರ ವರ್ಷದಿಂದ ಸತತವಾಗಿ ಭಕ್ತಿಯ ಸೇವೆ ಸಲ್ಲಿಸುತ್ತಿರುವವರಾಗಿದ್ದಾರೆ.

## ವಿಜಯನಗರ ಸ್ಥಾಪನೆಯ ಕಾಲದ ಪರಿಸ್ಥಿತಿ

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಮೊದಲಿಗೆ ಹಾಗೂ ಸ್ಥಾಪನೆಯ ಹೊತ್ತಿಗೆ ತಿರುಮಲೆಯ ಆಲಯದ ಆಡಳಿತದಲ್ಲಿ ಒಂದು ವಿಶೇಷ ಸಂಧಿಕಾಲವುಂಟಾಯಿತು ಶ್ರೀರಂಗದ ಶ್ರೀರಂಗನಾಥಸ್ವಾಮಿಯನ್ನು ಶ್ರೀರಂಗದಲ್ಲಿ ಉಂಟಾದ ಬುಡಮೇಲು ಕೃತ್ಯಗಳಿಂದಾಗಿ ಇಲ್ಲಿಗೆ ತರುವಂತೆ ಆಯಿತು

ಶ್ರೀರಂಗದ ಆಲಯದ ಬಹುತೇಕ ಪ್ರಮುಖ ಘಟ್ಟಗಳನ್ನು ಚಿತ್ರಿಸಿ ಇತಿಹಾಸವನ್ನು ವಿವರಿಸುವ ಕೋಯಿಲ್ ಒಳುಗು ಕೃತಿಯು ಕ್ರಿಶ 14 ನೇ ಶತಮಾನದಲ್ಲಿ ದಕ್ಷಿಣ ಇಂಡಿಯಾ ದೇಶದಲ್ಲಿ ನಡೆದ ಮುಸಲ್ಮಾನ ಆಕ್ರಮಣದಲ್ಲಿ ಯಾವ ಪರಿಸ್ಥಿತಿ ಉಂಟಾಗಿದ್ದಿತು ಎಂಬುದರ ವಿವರಣೆ ನೀಡುತ್ತದೆ ಶ್ರೀರಂಗದಲ್ಲಿ ಸ್ವಾಮಿಯ ಮೆರವಣಿಗೆ ಹೊರಟಿದ್ದಿತು ನದಿಯ ಮಧ್ಯಭಾಗದಲ್ಲಿ ಸ್ವಾಮಿಯನ್ನು ಇಳಿಸಿ, ಸಂಜೆಯ ವರೆಗೆ ಪರಿಪರಿಯ ಪೂಜಾದಿಗಳನ್ನು ನಿರ್ವಹಿಸಿ ಪುನಃ ಮೆರವಣಿಗೆಯಲ್ಲಿ ಸ್ವಾಮಿಯನ್ನು ಆಲಯಕ್ಕೆ ಕರೆದು ತರುವ ಕಾರ್ಯಕ್ರಮ. ಉತ್ಸಾಹದಿಂದ ಈ ಕಾರ್ಯಕ್ರಮ ನಡೆದಿದ್ದಿತು. ಕಣ್ಣಾನೂರಿನ ಕಡೆಯಿಂದ ಇದ್ದಕ್ಕಿದ್ದಂತೆ ನದಿಯತ್ತ ಮಹಮದ್ ಬಿನ್ ತುಗ್ಲಖನ ರಾವುತ ದಳ ಆಕ್ರಮಣ ನಡೆಸಿತು ಮೆರವಣಿಗೆಯಲ್ಲಿ ನಡೆದಿದ್ದ ಭಕ್ತ ಮಂದಿ ತತ್‌ಕ್ಷಣವೇ ಉತ್ಸವ ಮೂರ್ತಿಯನ್ನು ಊರಿನಿಂದ ಹೊರಗೊಯ್ದು ಆಕ್ರಮಣದಿಂದ ರಕ್ಷಿಸಲು ತೀರ್ಮಾನಿಸಿದರು. ಮಧ್ಯವಯಸ್ಕರಾದ ಪಿಳ್ಳೈ ಲೋಕಾಚಾರ್ಯರು ಸಾಕಷ್ಟು ಬಲಶಾಲಿಗಳಾಗಿದ್ದು, ಹೆಚ್ಚು ಓಡಾಟವಿಲ್ಲದ ಒಳದಾರಿಗಳಲ್ಲಿ ಸ್ವಾಮಿಯ ಪಲ್ಲಕ್ಕಿಯನ್ನು ತೆಗೆದುಕೊಂಡು ಪುದುಕೋಟೆಯತ್ತ ನಡೆದರು. ಕಡೆಗೆ ತಿರುಪತಿಯೇ ಅತಿ ಸುರಕ್ಷಿತವಾದ ಸ್ಥಳವೆಂದು ನಿರ್ಧರಿಸಿದರು ರಾಜ್ಯದ ಏಳುಬೀಳುಗಳಲ್ಲಿ ಅತಿ ಸುರಕ್ಷಿತ ಪ್ರದೇಶವೆಂದರೆ ತಿರುಪತಿ ಎಂಬುದಾಗಿ ನಿರ್ಧರಿಸಿ, ತೆರಕಣಾಂಬಿಯ ಮೂಲಕ ಮೈಸೂರು ದಾರಿಯಲ್ಲಿ ತಿರುಪತಿಯನ್ನು ಸೇರಿದ್ದನ್ನು ನೆನೆದರೆ ಈ ನಡುವಣ ಪ್ರದೇಶ ದಾಳಿಗೆ ಸಿಕ್ಕಿದ್ದರೂ ಹೆಚ್ಚು ಕಡಮೆ ಗಲಭೆ ಗದ್ದಲಗಳಿಗೊಳಗಾಗದೆ ರಾಜಮಾರ್ಗಗಳೆಲ್ಲ ಮುಕ್ತವಾಗಿದ್ದಿತೆಂದೇ ತಿಳಿದು ಬರುತ್ತದೆ. ಕ್ರಿ.ಶ. 1328 ರ ಮುಸ್ಲಿಂ ಧಾಳಿಯ ನಂತರ ಈ ಸಂಗತಿ ನಡೆದಿದ್ದು, ರಂಗನಾಥಸ್ವಾಮಿಯ ತಿರುಪತಿಯಾತ್ರೆಯನ್ನು ಆರಂಭಿಸಿರಬೇಕು. ಸಿಂಗಯ ನಾಯಕ ಅಥವಾ ಅವನ ಔರಸರು ಪಶ್ಚಿಮದಲ್ಲಿ ತೆರಕಣಾಂಬಿಯಿಂದ ತಿರುಪತಿಯ ವರೆಗಿನ ಪ್ರಾಂತದ ಪ್ರಭುತ್ವವನ್ನು ಪಡೆದಿದ್ದಾಗ ಈ ಘಟನೆ ಸಂಭವಿಸಿರಬೇಕು. ಈ ಮಾತು ಇಬನ್-ಬಟೂಟನಿಂದಲೂ ಸಮರ್ಥನೆ ಪಡೆಯುತ್ತದೆ. ಹೀಗೆ ಮಹಮದೀಯರ ಆಕ್ರಮಣ ಕಾಲದಲ್ಲಿಯೂ ಶ್ರೀರಂಗದ ರಂಗನಾಥಸ್ವಾಮಿಗೇ ರಕ್ಷಣೆ ಕೊಡುವಷ್ಟು ಪ್ರಶಾಂತ ಪರಿಸ್ಥಿತಿ ಇಲ್ಲಿದ್ದಿತೆನ್ನಬಹುದು.

ಈ ರೀತಿಯ ಸುರಕ್ಷತಾ ಸಮೃದ್ಧವಾದ ಸ್ಥಳವಾದ್ದರಿಂದಲೇ ವೀರ ಬಲ್ಲಾಳನು ದಕ್ಷಿಣ ಭಾರತ ರಾಜಮಾರ್ಗಗಳಲ್ಲಿ ಹಾಯುವ ಈ ಪ್ರಾಂತ್ಯದ ತಿರುವಣ್ಣಾಮಲೆಯಲ್ಲಿ ನೆಲೆಗೊಂಡು ಅಲ್ಲಿ ಬಲವಾದ ದುರ್ಗವನ್ನೇ ನಿರ್ಮಿಸಿದನು. ಇದರಿಂದಾಗಿ ರಾಜಮಾರ್ಗದಲ್ಲಿ ಒಂದು ಸುರಕ್ಷಿತವಾದ ಸ್ಥಳ ದೊರೆತದ್ದೇ ಅಲ್ಲದೆ, ಕಷ್ಟಕಾಲದಲ್ಲಿ ಹಿಂದೆ ತಿರುಗಲು ಒಂದು ದಾರಿಯೂ ದೊರೆತಂತಾಯಿತು. ಜೊತೆಗೇ ಮಧುರೆಯ ಸುಲ್ತಾನರ ವಿರುದ್ಧ ತನ್ನ ಕಾರ್ಯಾಚರಣೆಯನ್ನು ವಿಸ್ತರಿಸಲು ಆತನಿಗೆ ಒಂದು ಅನುಕೂಲವಾದ ಕೇಂದ್ರವೂ ದೊರೆತಂತೆ ಆಯಿತು.

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಹಾಗೂ ಮುಂಚಿನ ಹೊತ್ತಿನಲ್ಲಿ ತಿರುಮಲೆಯ ಆಲಯದ ಪರಿಸ್ಥಿತಿಗಳು ಹೇಗಿದ್ದವು ಎನ್ನಲು ಆಲಯದ ಶಾಸನಗಳೇ ಪ್ರಮುಖ ಆಧಾರಗಳು. ಈ ಬಗ್ಗೆ ಮೂರು ಅಂಶಗಳನ್ನು ಪ್ರತ್ಯೇಕವಾಗಿ ಗಮನದಲ್ಲಿಟ್ಟುಕೊಂಡು ಮುಂದುವರಿಯಬೇಕು

ಮೊದಲನೆಯದಾಗಿ ಈ ಶಾಸನಗಳಲ್ಲಿ ರಾಜನ ಆಳ್ವಿಕೆಯ ವರ್ಷವನ್ನು ಗುರುತಿಸದೆ, ಎಲ್ಲ ಶಾಸನಗಳಲ್ಲೂ ಶಕವರ್ಷದಲ್ಲಿ ತಿಥಿವಾರ ನಕ್ಷತ್ರಗಳೊಂದಿಗೆ ದಿನವನ್ನು ಗುರುತಿಸಲಾಗಿದೆ. ಇದರಿಂದಾಗಿ ಕಾಲವನ್ನು ಖಚಿತವಾಗಿ ಗುರುತಿಸುವುದು ಸಾಧ್ಯವಾಗಿದೆ. ಎರಡನೆಯದಾಗಿ, ಇತರ ಶಾಸನಗಳಲ್ಲಿಯಂತೆ ರಾಜನ ಪ್ರಶಸ್ತಿಯನ್ನು - ಶಾಸನದ ವಿಷಯದಲ್ಲಿ ನೇರ ಸಂಬಂಧ ಹೊಂದಿಲ್ಲದಿದ್ದಲ್ಲಿ ನೀಡಿಲ್ಲ ಮೂರನೆಯದಾಗಿ ಈ ಶಾಸನಗಳಲ್ಲಿ ಖಾಸಗೀವ್ಯಕ್ತಿಗಳ ದಾನಗಳನ್ನು ದಾಖಲಿಸುವಾಗ ರಾಜನ ಹೆಸರನ್ನು ಸಾಮಾನ್ಯವಾಗಿ ಉಲ್ಲೇಖಿಸುವುದಿಲ್ಲ.

ವಿಜಯನಗರ ಸಾಮ್ರಾಜ್ಯಸ್ಥಾಪನೆಯ ಪ್ರಥಮ ಶತಮಾನಕ್ಕೆ ಸಂಬಂಧಿಸಿದ ಆಲಯ ಶಾಸನಗಳು ಬಹುಸಂಖ್ಯೆಯಲ್ಲಿವೆ. ಮೊದಲನೆಯದು ತಿ.ತಿ. 487. ಇದರಲ್ಲಿ ಕಾಲಸೂಚನೆಯಿಲ್ಲದಿದ್ದರೂ ತಿರುಮಲೆಯ ಪರ್ವತದ ಆಲಯದಲ್ಲಿ ಬುಕ್ಕರಾಯಸಂಧಿ ಎಂಬ ಹೆಸರಿನಲ್ಲಿ ನೈವೇದ್ಯವನ್ನು ಸಮರ್ಪಿಸಬೇಕೆಂದು ಬುಕ್ಕ I ಸಾಮ್ರಾಟನು ಏರ್ಪಾಡು ಮಾಡಿದ ವಿಷಯವಿದೆ. ಹಿಂದೆಯೇ ಹೇಳಿರುವಂತೆ ಕ್ರಿ.ಶ. 1390 ರ ವರೆಗೆ ವಿಜಯನಗರ ಸಾಮ್ರಾಜ್ಯದ ದಕ್ಷಿಣ ಇಂಡಿಯಾದಲ್ಲಿನ ಅಧಿಕಾರ, ಪ್ರಭುತ್ವಗಳು ಆಲಯದ ಹಂತದ ವರೆಗೆ ಹರಿದು ಬಂದಿರಲಿಲ್ಲವೆಂದು ಕಾಣುತ್ತದೆ ಹೀಗಾಗಿ ಕ್ರಿಶ 1336 ರಲ್ಲಿಯೇ ಸ್ಥಾಪನೆಯಾಗಿದ್ದರೂ 1374 ರ ವರೆಗೆ ವಿಜಯನಗರ ಸಾಮ್ರಾಜ್ಯದ ನೇರ ಆಡಳಿತದ ಪ್ರಭಾವಲಯದಲ್ಲಿ ಆಲಯವು ಬರಲಿಲ್ಲವೆಂದು ಊಹಿಸುವುದು ಸೂಕ್ತವಾಗುತ್ತದೆ ಇವೆಲ್ಲದರೊಂದಿಗೆ 1371 ರಲ್ಲಿಯೇ ಶ್ರೀರಂಗನಾಥನನ್ನು ಆಲಯದಿಂದ ಹೊರ ಸಾಗಿಸಿ ಪುನಃ ಶ್ರೀರಂಗಕ್ಕೆ ಸೇರಿಸಿದ್ದು ಇವರಿಂದಾಗಿ ಸಾಮ್ರಾಜ್ಯದ ಪ್ರಭುತ್ವದ ಬಗ್ಗೆ ಪ್ರಜೆಗಳಲ್ಲಿ ನಂಬಿಕೆ ಭರವಸೆಗಳು ಈ ಹೊತ್ತಿಗೆ ಮೂಡಿಬಂದವೆಂದೂ ವಿಜಯನಗರದ ರಾಜರು ತಮ್ಮ ಒಡೆತನವನ್ನು ಸ್ಥಾಪಿಸಿ, ಅಧಿಕಾರವನ್ನು ಚಲಾಯಿಸುವ ಸಾಮರ್ಥ್ಯವನ್ನು ಶ್ರುತಪಡಿಸಿದ್ದರು ಎಂದೂ ತಿಳಿದುಬರುತ್ತದೆ

ತಿ ತಿ 237 ರ ಶಾಸನವು ಹೇಳುವ ಮಂಗಿದೇವ ಮಹಾರಾಯನು ಈಗಾಗಲೇ ಪ್ರಸ್ತಾಪಿಸಿರುವಂತೆ ಮಧುರೆಯನ್ನು ಸುಲ್ತಾನರಿಂದ ಮುಕ್ತಗೊಳಿಸುವಲ್ಲಿ ವೀರ ಕಂಪಣನಿಗೆ ಪ್ರಧಾನವಾದ ನೆರವು ನೀಡಿದ ಸಾಳುವ ಸಾಮಂತ ಮಂಗಿದೇವನಾಗಿರಬೇಕು. ತಿ.ತಿ 496 ಶಾಸನವು ಪಡಿಕಾವಲಿಗೋಪುರದ ಮೇಲಿರುವ ಎರಡು ಸಾಲಿನ ಮುಕ್ಕಾಗಿರುವ ಶಾಸನ. ಶಂಭುಕುಲ ಚಕ್ರವರ್ತಿ ತಿರುಮಲ್ಲನಾಥ ಶಂಭುವರಾಯ ಪೆರುಮಾಳರ ಬಗ್ಗೆ ಹೇಳುತ್ತದೆ. ಇದು ಕುತೂಹಲಕಾರಿಯಾಗಲು ಕಾರಣ ಸಂಬುವರಾಯರು ಪಾಲಾರ್ ನದೀಬಯಲಿನ ತಿರುನಲ್ಲಾರು, ವಿಂಬಿಪುರಗಳ ರಾಜಧಾನಿಗಳಾಗಿದ್ದ ಚೋಳರೊಂದಿಗೆ ಸಂಬಂಧ ಹೊಂದಿದ್ದರು. ಕುಮಾರ ಕಂಪಣನಿಂದ ಸೋಲಿಸಲ್ಪಟ್ಟ ಇವರು ವಿಜಯನಗರದ ಅಂಕೆಗೆ ಬರುವಂತೆ ಆಯಿತು.

103 ತಿ.ತಿ. ಶಾಸನವು ವರದರಾಜಸ್ವಾಮಿ ಆಲಯದಲ್ಲಿನದಾಗಿದ್ದು ಈ ಹಿಂದೆಯೇ ಹೇಳಿರುವಂತೆ ವಿಜಯನಗರದರಸ ಹರಿಹರರಾಯನ ಹೆಸರಿನಲ್ಲಿ ಮುಲ್ಲೈ ತಿರುವೆಂಕಟ ಜೀಯರ್ ಹಾಕಿಸಿದುದಾಗಿದೆ.

ಬಂಗಾರದ ಬಾಗಿಲ ಬಳಿಯ ತಿ.ತಿ. 108 ನೇ ಶಾಸನವು ಪ್ರಥಮ ಬಾರಿಗೆ ಶ್ರೀಮನ್ ಮಹಾರಾಜ ರಾಜಪ್ರತಾಪ ಶ್ರೀ ವೀರಪ್ರತಾಪ ದೇವರಾಯ ಮಹಾರಾಯನ ಹೆಸರನ್ನು ಹೇಳುತ್ತ ಶಕವರ್ಷ 1351 (ಕ್ರಿ.ಶ. 1429) ರಲ್ಲಿ ಆತ ಆಲಯಕ್ಕೆ ಕೊಟ್ಟ ದಾನವನ್ನು ತಿಳಿಸುತ್ತದೆ. ಈ ಮೊದಲೇ ಆಲಯಕ್ಕೆ ನೀಡಲಾಗಿದ್ದ ಹಲವು ಸ್ಥಳಗಳೊಂದಿಗೆ ಹಲವು ಗ್ರಾಮಗಳ ಜಮೀನುಗಳನ್ನು ಆಲಯಕ್ಕೆ ನೀಡಿದಂತೆ ತಿಳಿಸುತ್ತದೆ. ಇದರಿಂದಾಗಿ ಉಂಟಾದ ಉತ್ಪನ್ನದಲ್ಲಿ ರಾಜನ ಹೆಸರಿನಲ್ಲಿ ಕೆಲವು ಉತ್ಸವಗಳನ್ನೂ, ನೈವೇದ್ಯಗಳನ್ನು ನಡೆಸಲು ಹೇಳಿದಂತೆ ತೋರುತ್ತದೆ. ಈ ದಾಖಲೆಯು ಒಡೆದು ಹೋಗಿರುವುದರಿಂದ ಯಾವುದೇ ರೀತಿಯ ತಾತ್ಪರ್ಯವನ್ನೂ ಹೊರಪಡೆಯಲಾಗದು ಚಂದ್ರಗಿರಿಯ ಕೋಶಾಗಾರಕ್ಕೆ ತೆರಿಗೆಗಳನ್ನು ಒಪ್ಪಿಸುತ್ತಿದ್ದ ಹಲವಾರು ಹಳ್ಳಿಗಳ ಹೆಸರನ್ನು ಹೇಳಿದ್ದು ಈ ಆದಾಯವನ್ನೇ ಆಲಯಕ್ಕೆ ನೀಡಲಾಗಿದೆ.

ಸ್ಥೂಲವಾಗಿ ಹೇಳಬೇಕೆಂದರೆ ವಿಜಯನಗರ ಸಾಮ್ರಾಜ್ಯದ ಮೊದಲ ಶತಮಾನದ ಕಾಲದಲ್ಲಿನ ಮೊದಲ ಶಾಸನವು ಬುಕ್ಕರಾಯನದಾಗಿದ್ದು ಆದರಿಂದ ಯಾವುದೇ ಪೂರ್ಣಾರ್ಥವನ್ನೂ ಪಡೆಯಲಾಗದಂತೆ ತ್ರುಟಿತವಾಗಿದೆ ಹಾಗೂ ಅಕ್ಷರಗಳು ಕರಗಿವೆ. ಆದರೆ ಬುಕ್ಕರಾಯನ ಹೆಸರಿನಲ್ಲಿ ಯಾವುದೋ ಧಾರ್ಮಿಕ ಕಾರ್ಯವನ್ನು ನಡೆಸಿರುವುದಂತೂ ಸ್ಪಷ್ಟವಾಗಿದೆ. ಕಡೆಯ ಶಾಸನವು ನಮ್ಮನ್ನು ಮಲ್ಲಿಕಾರ್ಜುನನ ಆಡಳಿತಕ್ಕೆ ಎಂದರೆ ಕ್ರಿ.ಶ. 1457 ಕ್ಕೆ ಕರೆದೊಯ್ಯುತ್ತದೆ. ಈತ ಕ್ರಿ.ಶ. 1465 ರಲ್ಲಿ ತೀರಿಕೊಂಡು, ಈತನ ಸೋದರನಾದ ವಿರೂಪಾಕ್ಷನು - ಚರಿತ್ರಕಾರರು ಗುರುತಿಸುವಂತೆ ಮೂರನೇ ವಿರೂಪಾಕ್ಷನು - ವಿಜಯನಗರದ ರಾಜನಾದನು. ಈ ಪರಿವರ್ತನೆಯಿಂದಾಗಿ ವಿಜಯನಗರದ ಇತಿಹಾಸವು ಮುಖ್ಯವಾಗಿ ತಿರುಪತಿಯ ಇತಿಹಾಸವು ಹೊಸ ತಿರುವನ್ನು ಪಡೆಯುವಂತೆ ಆಯಿತು.

ಮಾನ್ಯ ಮನ್ನಣೆ ಮಾಗಾಣೆ ನೀಡಿದ ರಾಜರುಗಳ ಸಾಲಿನಲ್ಲಿ ಅಸ್ಪಷ್ಟವಾಗಿಯೇ ಆದರೂ - ಬುಕ್ಕರಾಯ, ಕುಮಾರ ಕಂಪಣ, ಎರಡನೇ ದೇವರಾಯ, ಮಲ್ಲಿಕಾರ್ಜುನರು ಉಲ್ಲೇಖಿತರಾಗಿರುವುದನ್ನು ಕಂಡಿದ್ದೇವೆ. ಇವುಗಳಲ್ಲಿನ ಕಾಲಸೂಚನೆಯು ಮೇಲೆ ತಿಳಿಸಿದಂತೆ ಅಸ್ಪಷ್ಟವಾಗಿದೆ. ಇಲ್ಲಿನ ಶಾಸನಗಳಲ್ಲಿ ಈ ಹೆಸರುಗಳು ಕಂಡುಬರಲು ಕಾರಣವೆಂದರೆ ಆಲಯಕ್ಕೆ ನೀಡಿದ ಸಮರ್ಪಣೆಗಳು ಈ ರಾಜರುಗಳ ಹೆಸರಿನಲ್ಲಿಯೇ ನೀಡಿದವುಗಳಾಗಿದ್ದವು. ಈ ಹಿಂದಿನ ಕಾಲದಲ್ಲಿದ್ದಂತೆಯೇ ಆಲಯದ ಆಡಳಿತವು ಸ್ವಯಂಪ್ರತಿಪತ್ತಿಯದಾಗಿ ಸ್ಥಳೀಯ ಶ್ರೀವೈಷ್ಣವರ ಕೈಯಲ್ಲಿದ್ದಿತು.

## ತಿರುಮಲೆಯಲ್ಲಿ ವಸತಿ ಸೇವಾಶುಲ್ಕ ಪರಿಷ್ಕರಣ

ತಿರುಮಲೆಯಲ್ಲಿನ ಗಣ್ಯವ್ಯಕ್ತಿಗಳ ವಸತಿಗಳ ದಿನಂಪ್ರತಿ ಸೇವಾಶುಲ್ಕವನ್ನು ಕೆಳಕಂಡಂತೆ ಪರಿಷ್ಕರಣಗೊಳಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಈ ಹೊಸ ದರ ಪಟ್ಟಿಯಂತೆ ಸೇವಾ ಶುಲ್ಕವನ್ನು ಸಲ್ಲಿಸಬೇಕೆಂದು ಕೋರಲಾಗಿದೆ.

| ವಸತಿಯ ವಿವರ | ಹಿಂದಿನದರ ದಿನಂಪ್ರತಿ | ಈಗಣ ದರ ದಿನಂಪ್ರತಿ |
|---|---|---|
| 1. ಎಸ್. ಪಿ. ಅತಿಥಿಗೃಹ ಪ್ರಾಂತ. | | |
| ಎಸ್.ಪಿ.ಜಿ.ಎಚ್. ಅತಿಥಿಗೃಹ | | |
| ಸೂಟ್ 1 ಹಾಗೂ 9 (ಮಾಸ್ಟರ್‌ಸೂಟ್ಸ್) | ರೂ. 1500/- | ರೂ. 2500/- |
| ಸೂಟ್ 2 ರಿಂದ 8 ವರೆಗೆ | ರೂ 500/- | ರೂ 750/- |
| 2. ಹರಿಸದನ ಅತಿಥಿಗೃಹ | | |
| ಸೂಟ್ 1ರಿಂದ 7 | ರೂ. 1000/- | ರೂ. 1500/- |
| 3. ರಾಜ್ಯಲಕ್ಷ್ಮಿ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ. 1000/- | ರೂ. 1500/- |
| ಸೂಟ್ 5 (ಮಾಸ್ಟರ್ ಸೂಟ್) | ರೂ 1500/- | ರೂ 1500/- |
| 4. ವಿದ್ಯಾಸದನ ಅತಿಥಿಗೃಹ | | |
| ಸೂಟ್ 2 ರಿಂದ 5 | ರೂ. 500/- | ರೂ 750/- |
| ಸೂಟ್ 1 (ಮಾಸ್ಟರ್ ಸೂಟ್) | ರೂ. 1500/- | ರೂ. 2000/- |
| 5. ಶ್ರೀನಿವಾಸ ನಿಲಯಂ | | |
| ಸೂಟ್ 1 ರಿಂದ 4 | ರೂ. 500/- | ರೂ 1000/- |
| ಸೂಟ್ 5 | ರೂ 500/- | ರೂ. 500/- |
| 6. ಇಂದಿರಾ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ. 500/- | ರೂ. 750/- |
| 7. ಗೋದಾವರಿ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ. 500/- | ರೂ. 750/- |
| 8. ಎಸ್. ವಿ. ಅತಿಥಿಗೃಹ ಪ್ರಾಂತ | | |
| ವಿಶೇಷ ರೀತಿಯ ಕಾಟೇಜುಗಳು | | |
| ಎಸ್. ಜಿ. ಸಿ. ಕಾಟೇಜುಗಳು | | |
| 1 ರಿಂದ 18, 20,22. | ರೂ 400/- | ರೂ 600/- |
| 9. ನೂತನ ಅತಿಥಿಗೃಹಗಳು | | |
| ಅ) ವಿಷ್ಣು ನಿಲಯ | | ರೂ. 750/- |
| ಒಳಗಣ 3 ಸೂಟ್‌ಗಳು | | |
| ನೆಲ ಅಂತಸ್ತು - 2 ಸೂಟುಗಳು | | ರೂ 750/- |
| ಮೊದಲ ಅಂತಸ್ತು ಮಾಸ್ಟರ್ ಸೂಟ್ | | ರೂ. 2000/- |
| ಆ) ಬಾಲಾಜಿ ಕುಟೀರ | | |
| 6 ಸೂಟ್‌ಗಳು (ಧರ್ಮಗಿರಿ ರಸ್ತೆ) | | ರೂ. 750/- |

ಯಾತ್ರಿಕ ಭಕ್ತರು ಮೇಲಿನ ಪರಿಷ್ಕೃತ ದರಗಳನ್ನು ಗಮನಿಸಿ ವಸತಿ ಸೌಕರ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ

ತಿ. ತಿ. ದೇ.

ಆಲಯದ ಆಡಳಿತ ಸಂಸ್ಥೆಯ ವಿವರಣೆಗಳಿಂದ ಇದು ಸ್ಪಷ್ಟವಾಗಿ, ಈ ಹಿಂದೆ ಭಗವದ್ರಾಮಾನುಜರು ಪ್ರವೇಶಗೊಳಿಸಿದ ಸುಧಾರಣೆಗಳಿಗೆ ಅನುಗುಣವಾಗಿಯೇ ಇದ್ದಿತು ಅವರು ಪ್ರವೇಶಗೊಳಿಸಿದ ಹಲವಾರು ಉತ್ಸವಗಳ ಹೆಸರುಗಳನ್ನು ಹೇಳುವ ದಾಖಲೆಗಳಿವೆ. ಮೇಲೆದ್ದು ಕಾಣುವ ಒಂದು ಸುಧಾರಣೆಯೆಂದರೆ ರಾಮಾನುಜರು ಪ್ರವೇಶಗೊಳಿಸಿದ ನಾಲಾಯಿರ ದಿವ್ಯಪ್ರಬಂಧ ಪಠನೆ ಉತ್ಸವಕಾರ್ಯಗಳಲ್ಲಿ ಮುಂದುವರೆದು ಪ್ರತ್ಯೇಕ ದಿನಗಳಲ್ಲಿ ತಿರುಪ್ಪಾವೈ ಯಂತಹವುಗಳನ್ನು ಹಾಡಲು ಅನುಕೂಲ ಕಲ್ಪಿಸಲಾಯಿತು. ಇಲ್ಲಿಯವರೆಗೆ ದೇವರ ಸನ್ನಿಧಿಯಲ್ಲಿ ಅಥವಾ ಹೊರಗೆ ಮೆರವಣಿಗೆಯಲ್ಲಿ ಉತ್ಸವರನ್ನು ಕರೆದೊಯ್ದಾಗ ವೇದ ಪ್ರವಚನದ ಪದ್ಧತಿ - ಶಾಸನ ಹೇಳುವಂತೆ-" ತಿರುವೆಂಗಡ ಮುಡೈಯಾನನು ಮತ್ತೆಲ್ಲ ವೈಭವಗಳನ್ನು ಹೊಂದಿದ್ದರೂ, ವೇದ ಪಠನದ ಒಂದು ಅಂಶ ಮಾತ್ರ ಕೊರೆಯಾಗಿದ್ದಿತು". ನಾವು ಈ ಹೊತ್ತಿನಲ್ಲಿ ವೇದಪಾರಾಯಣ ಮಾಡಲು ಪ್ರಬಂಧವನ್ನುಂಟುಮಾಡಿರುವುದನ್ನು ನೋಡಬಹುದು. ಸ್ಥಳೀಯ ಶ್ರೀ ವೈಷ್ಣವ ಪ್ರಮುಖರು ಈ ಕೊರತೆಯನ್ನು ದೇವಣ್ಣ ಉಡೆಯರ ಗಮನಕ್ಕೆ ತಂದಾಗ, ಆತ ದೇವರಾಯ ಮಹಾರಾಯ - ಎರಡನೇ ದೇವರಾಯನ - ಹೆಸರಿನಲ್ಲಿ ಕಲಿಕನ್ನಿದಾಸರ ಸೂಚನೆಯಂತೆ ಸಿದ್ಧಕುಟ್ಟೈಯ ವಾರ್ಷಿಕ ಆದಾಯದ ಅರ್ಧಭಾಗವನ್ನು ಈ ಕಾರ್ಯದಲ್ಲಿ ವಿನಿಯೋಗಿಸುವಂತೆ ಏರ್ಪಾಡು ಮಾಡಿದ್ದು ದಾಖಲಾಗಿದೆ. ಆಲಯಕ್ಕೆ ಹಲವಾರು ದಾನ ದತ್ತಿಗಳು ನೀಡಲ್ಪಟ್ಟವು. ಅವುಗಳಲ್ಲಿ ಹಲವು ರಾಜಪುರುಷರು ಸಮರ್ಪಿಸಿದವುಗಳಾದರೆ ಮತ್ತೆ ಹಲವು ಆಲಯದ ಸುತ್ತ ಮುತ್ತಲಿನ ಮಠಗಳ ಅಧಿಪತಿಗಳು, ನಂದನ ವನಗಳ ಮತ್ತಿತರ ಆಲಯ ಸಂಸ್ಥೆಗಳ ಆಡಳಿತದ ಯಾಜಮಾನ್ಯದ ಸನ್ಯಾಸಿಗಳು, ಬ್ರಹ್ಮಚಾರಿಗಳು ನೀಡಿದ ಕಾಣಿಕೆಗಳಾಗಿದ್ದುವು. ಇವುಗಳಲ್ಲಿನ ಸಾಧಾರಣ ಲಕ್ಷಣಗಳೆಂದರೆ ದಾನಗಳಲ್ಲಿ ಕಿರಿಯ ಪ್ರಮಾಣದವುಗಳು ಸಾಧಾರಣವಾದವುಗಳಾದರೆ ದೊಡ್ಡವುಗಳು ಈಗಾಗಲೇ ಕೃಷಿ ನಡೆಯುತ್ತಿದ್ದ ಭೂಮಿಯ ಅಭಿವೃದ್ಧಿಗೆ ಅಥವಾ ಬಂಜರು ಭೂಮಿಯ ವ್ಯವಸಾಯಕ್ಕೆ ಯೋಗ್ಯವಾದ ರೀತಿಯ ನೀರಾವರೀ ವ್ಯವಸ್ಥೆಯಲ್ಲಿ ತೊಡಗಿಸುವ ಬಂಡವಲವನ್ನು ಒದಗಿಸುತ್ತಿದ್ದು ಆದಾಯವನ್ನು ಹೆಚ್ಚಿಸಿ, ಪೂಜಾ ಉತ್ಸವಗಳಲ್ಲಿ ಬಳಕೆ

ರುವಂತೆ ಮಾಡುತ್ತಿದ್ದವು. ಇದರಿಂದ ಎರಡು ತ್ತಿಯ ಉದ್ದೇಶ ಸ್ಪಷ್ಟವಾಗುತ್ತದೆ. ಧಾರ್ಮಿಕ ಗಿ ಪುಣ್ಯಕಾರ್ಯ ಮಾಡುವುದು ಒಂದಾದರೆ ಮಿಯಲ್ಲಿನ ವ್ಯವಸಾಯವನ್ನು ಹೆಚ್ಚಿಸಿ ಹೆಚ್ಚಿನ ಮಿಯನ್ನು ಕೃಷಿಯೋಗ್ಯವನ್ನಾಗಿ ಮಾಡಿ ್ಯ ಸಮೃದ್ಧಿಯನ್ನುಂಟಾಗಿಸುವುದು ಹೀಗಾಗಿ ನಿಯ ಆಧ್ಯಾತ್ಮಿಕ ಅಭಿವೃದ್ಧಿಗೆಂದು ನೀಡಿದ ನವು ಸಮಾಜದ ಅಭಿವೃದ್ಧಿಯಲ್ಲಿಯೂ ಕೆಲ ್ಕ ಬಂದಿತೆನ್ನಬೇಕು. ನೇರ ಸರಕಾರದ ನಿಯಂ ಂ ಅಥವಾ ದಾನಗಳನ್ನು ಕಾಣುವುದಿಲ್ಲವಾಗಿ, ಜ, ರಾಜಪುರುಷ, ಸ್ತ್ರೀಯರು ದಾನ ಮಾಡಿದಾ ಯೂ ತಮ್ಮಮೇಲ್ಮೆಯ ಕೋರಿಕೆಯಿಂದ ಮಾಡಿ ರಿಂದ ಸ್ವಂತ ಸಂಪತ್ತಿನಿಂದಲೇ ದಾನ ಮಾಡು ವುದನ್ನು ಕಾಣುತ್ತೇವೆ. ಹೀಗಾಗಿ ಸರ್ಕಾರಕ್ಕೆ ಬಂಧಿಸಿದ್ದು ಯಾವುದೂ ಇಲ್ಲವೆಂದೇ ಆಗಿ, ಲಯದ ಎಲ್ಲ ಆಸ್ತಿಗಳೂ, ಕೊನೆಪಕ್ಷ ಈ ಆಲ ಕ್ಕೆ ಸಂಬಂಧಿಸಿದ ಆಸ್ತಿಗಳೆಲ್ಲ ಖಾಸಗಿಯವ ದ ಆಲಯದ ಅಭಿವೃದ್ಧಿಗೆಂದು ನೀಡಿದ್ದರಿಂದ ಂದದ್ದೇ ಆಗಿದ್ದವು.

## ಸಂಗಮ ವಂಶ

ಸಾಳುವ ನರಸಿಂಹದೇವ ಮಹಾರಾಯನ ಲದಿಂದ ಆಲಯದ ಇತಿಹಾಸದಲ್ಲಿ ಹೊಸ ಂದು ಅಧ್ಯಾಯ ಆರಂಭವಾಯಿತು. ಕ್ರಿಶ. 359 ರಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಆಲ ದ ವಿಮಾನಕ್ಕೆ ಚಿನ್ನದ ಮುಲಾಮು ಮಾಡಿ ದ ಸಾಳುವ ಮಂಗಿದೇವ ಮಹಾರಾಯನ ರಿಮಗನೀತ. ಸಾಳುವ ಎಂದರೆ ಗಿಡುಗ ಂದರ್ಥ. (ದೇಟಿಯ ಪಕ್ಷಿ) ವಿಜಯನಗರ ಸಾಮ್ರಾಜ್ಯಕ್ಕೆ ಸಾಳುವ ನರಸಿಂಹನು ಪೂರ್ಣ ದ ದೆಂಬಲವನ್ನು, ವಿಶ್ವಾಸವನ್ನು ನೀಡಿದ. ನ್ನ ರಾಜಕೀಯ ದೂರದರ್ಶಿತ್ವ ಹಾಗೂ ುತ್ಸದ್ದಿ ತನದಿಂದ ಅಸಂಖ್ಯ ಸಾಮಂತರ ಒಳ ಗಳ, ಕಿರಿಕಿರಿಗಳಿಂದ ಮೇಲೇರಿ ನಿಂತ. ಆಲ ದ ವಿಷಯದಲ್ಲಿ ಸಹಕಾರವನ್ನು ನೀಡಲೂ, ಹಾಯವನ್ನು ಮಾಡಲೂ ತಕ್ಕ ಹಿರಿಮೆಗರಿಮೆಗ ನ್ನು ಪಡೆದಿದ್ದ ಕಂದಾಡೈ ರಾಮಾನುಜ ಅಯ್ಯಂ ಾರ್ಯನ ಸಹವಾಸ ಪಡೆದಿದ್ದ. ಆಲಯದ ಾಸನಗಳು ಈ ಕಂದಾಡೈ ರಾಮಾನುಜ ಅಯ್ಯಂ ಾರ್ ರಾಜನಾದ ಸಾಳುವ ನರಸಿಂಹನ ಆಶ್ರಯ ಲ್ಲಿ ಅನೇಕ ದೂರಗಾಮಿ ಸುಧಾರಣೆಗಳನ್ನೂ, ಡಳಿತ ಪರಿವರ್ತನೆಗಳನ್ನೂ ಆಲಯದ ಪೂಜೆ ಉತ್ಸವಾದಿಗಳಲ್ಲಿ ಆಚರಣೆಗೆ ತಂದಂತೆ ವಿವರಿಸುತ್ತವೆ.

ಸಂಗಮ ವಂಶ ವಿಜಯನಗರ ಸಾಮ್ರಾಜ್ಯದ ಪ್ರಥಮ ಆಡಳಿತ ವಂಶವಾಗಿದ್ದು, ಅದರ ಮೊದಲನೆಯ ರಾಜ ಬುಕ್ಕರಾಯನು ಯಾವುದೇ ಶಾಸನದಲ್ಲಿಯೂ ನೇರವಾಗಿ ಪ್ರಸ್ತಾಪಕ್ಕೆ ಬರದಿದ್ದರೂ, ಆತನ ಆಡಳಿತಕಾಲಕ್ಕೆ ಸೇರಿದ ಮೂರು ಶಾಸನಗಳು - 487, 237, 238, ತಿ.ತಿ - ಇವೆ. ಮೊದಲೇ ಹೇಳಿದಂತೆ ಬುಕ್ಕರಾಯ ಸಂಧಿ ಎಂದು ಹೆಸರಾದ ಸಂಧಿಕಾಲ ನೈವೇದ್ಯವನ್ನು ಪ್ರತಿದಿನ ಎರಡು ಬಾರಿ ಸಮರ್ಪಿಸಲು ಆಲಯಕ್ಕೆ ಒಂದು ಗ್ರಾಮದಾನ ಮಾಡಿದ ಬಗ್ಗೆ - 487 ನೇ ಶಾಸನ ಹೇಳುತ್ತದೆ ಇತರ ಎರಡೂ ಶಾಸನಗಳೂ ಇಂತಹವೇ

ಬೇರೆ ಬೇರೆ ಕಡೆಗಳಲ್ಲಿ ದೊರೆತಿರುವ ಶಾಸನಗಳಲ್ಲಿ ಎರಡನೇ ಹರಿಹರರಾಯನು ಚಿದಂಬರ, (ಕನಕಸಭ) ಶ್ರೀಕಾಳಹಸ್ತಿ, ವೆಂಕಟಾದ್ರಿ (ತಿರುಮಲೆ) ಕಂಚಿ, ಶ್ರೀಶೈಲ, ಸೋಮಶಿಲ, ಅಹೋಬಿಲ, ಶ್ರೀರಂಗ, ಕುಂಭಕೋಣಗಳ ಆಲಯಗಳಿಗೆ ದಾನಗಳನ್ನು ನೀಡಿದ ಉಲ್ಲೇಖವಿದೆಯಾದರೂ ತಿರುಮಲೆಯ ಶಾಸನಗಳಲ್ಲಿ ಒಂದರಲ್ಲಿ ಮಾತ್ರವೇ (103 ತಿ.ತಿ.) ಈತನ ಉಲ್ಲೇಖ ಕಂಡುಬರುತ್ತದೆ. ಮಾಸಿ ತಿಂಗಳಿನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಗೆ ತನ್ನ ಹೆಸರಿನಲ್ಲಿ ಒಂದು ಉತ್ಸವವನ್ನು ಏರ್ಪಡಿಸಬೇಕೆಂದೂ, ಇದಕ್ಕೆ ವೆಚ್ಚಿಸಲು ತಕ್ಕ 100 ಪಣಂಗಳನ್ನು ಪ್ರತಿವರ್ಷವೂ ಪೆಂಗೋಡು ಗ್ರಾಮದ ಆದಾಯದಲ್ಲಿ ಇಲ್ಲಿನ ಶ್ರೀವೈಷ್ಣವ ಮಠದ ಮುಖ್ಯನು ನೀಡಬೇಕೆಂದೂ ಶಾಸನ ಹೇಳಿ ವೆ. ಪ್ರಾಯಶಃ ಮಠಕ್ಕೆ ಗ್ರಾಮವನ್ನು ಒಪ್ಪಿಸಿರಬೇಕು. ಧಾರ್ಮಿಕ ಪೀಠದ ಮುಖ್ಯರ ಈ ಮಧ್ಯವರ್ತಿತ್ವವು ತಿರುಕ್ಕಲಿ ಕನ್ನಿದಾಸರು ಎರಡನೇ ದೇವರಾಯನ ಕಾಲದಲ್ಲಿ ಪ್ರವೇಶಗೊಳಿಸಿದ ವೇದಪಾರಾಯಣ ಪದ್ಧತಿಯ ಪ್ರಭಾವ ವಿಜಯನಗರದರಸರ ಪ್ರಥಮ ವಂಶದವರಲ್ಲಿ ಹರಡುತ್ತ ಗೋಪುರಗಳ ನಿರ್ಮಾಣ, ಅನ್ನಸತ್ರಗಳ ಸ್ಥಾಪನೆ, ನಂದನವನಗಳ ನಿರ್ಮಾಣ, ಉತ್ಸವ ನಿವೇದನ ಪೂಜೆಗಳಲ್ಲಿ ಅರಸರು ಭಾಗವಹಿಸುತ್ತ ಕಂದಾಡೈ ರಾಮಾನುಜ ಅಯ್ಯಂಗಾರ್ಯನ ಮೂಲಕ ಸಾಳುವ ನರಸಿಂಹನು ಗ್ರಾಮದಾನಗಳನ್ನು ಕೈಗೊಳ್ಳುವವರೆಗೆ ವಿಸ್ತರಿಸಿದ್ದನ್ನು ಸೂಚಿಸುವುದು.

ಮತ್ತೊಂದು ಶಾಸನದಲ್ಲಿ ಈ ರಾಜನ ಇಬ್ಬರು ರಾಜ ಪ್ರತಿನಿಧಿಗಳ ಉಲ್ಲೇಖವಿದೆ.

ಎರಡನೇ ದೇವರಾಯನು ಅರೆಡಜನ್ ಶಾಸನಗಳಲ್ಲಿ ಪ್ರತಿನಿಧಿತನಾಗಿದ್ದಾನೆ. ಇವುಗಳ ಉಲ್ಲೇಖವನ್ನು ಈ ಹಿಂದೆಯೇ ಮಾಡಲಾಗಿದೆ. ಶಕ ವರ್ಷ 1351 ರ ಸೌಮ್ಯನಾಮಸಂವತ್ಸರದಲ್ಲಿ (ಕ್ರಿಶ 1429 - 12- 5) ಹಲವು ನಿತ್ಯ ನೈವೇದ್ಯಗಳಿಗಾಗಿ 1200 ಪೊಣ್ ಧನವನ್ನೂ ಮೂರು ಗ್ರಾಮಗಳನ್ನೂ ದಾನ ಮಾಡಿದರೆ, ಶಕ 1355 ರ ಪ್ರಮಾದೀಚ ನಾಮಸಂವತ್ಸರದಲ್ಲಿ (ಕ್ರಿಶ. 1433 - 11 - 22) ಉಡೈಯರ್ ದೇವಣ್ಣ ಉಡೆಯರ ಶಿಫಾರಸಿನಂತೆ ರಾಜಭಂಡಾರಕ್ಕೆ ಸೇರಿದ ಸಿದ್ಧಕುಟ್ಟೆ ಅಥವಾ ಶ್ರೀನಿವಾಸಪುರದ ಅರ್ಧ ಗ್ರಾಮಾದಾಯವನ್ನು ಪ್ರಾಯಶಃ ವಾರ್ಷಿಕ 200 ಪಣಗಳ ಆದಾಯವನ್ನು ಆಲಯದ ಶ್ರೀ ಭಂಡಾರಕ್ಕೆ - ಒಂದು ವರ್ಷದಿಂದ ನಿಂತುಹೋಗಿದ್ದ - ವೇದಪಾರಾಯಣ ಕೈಂಕರ್ಯವನ್ನು ಮುಂದುವರಿಸಲು ಬಂದ 24 ಮಂದಿ ಬ್ರಾಹ್ಮಣರ ವೇತನಕ್ಕಾಗಿ ನೀಡಿದನು. ಈ ಗ್ರಾಮದ ವಾರ್ಷಿಕ ಆದಾಯದ ಮಿಕ್ಕ ಅರ್ಧಭಾಗ ಈ ಮೊದಲೇ ಬ್ರಾಹ್ಮಣ ವೇತನಕ್ಕೆ ಮಾಸಲಾಗಿ ಆಲಯಭಂಡಾರಕ್ಕೆ ಸೇರಿದ್ದಿತು. (ತಿ.ತಿ. 89 ಹಾಗೂ 149) ಈ ಗ್ರಾಮವು ವೈಕುಂಠ ವಲನಾಡುವಿನ ಉಪವಿಭಾಗವಾದ ಕೊತ್ತಳಸ್ಥಳಕ್ಕೆ ಸೇರಿದುದಾಗಿದ್ದಿತು ಎನ್ನಲಾಗಿದೆ ಕೋಟ್ಟಂ ಹೆಸರು ಹೇಳದಿದ್ದರೂ ಸಹ, ವೈಕುಂಠ ವಲನಾಡು ಮತ್ತು ತಿರುಕ್ಕುಡವೂರು ನಾಡುಗಳೆರಡೂ ತಿರುವೆಂಕಟಕೋಟ್ಟಂಗೆ ಸೇರಿದ್ದು ಇದು ಚಂದ್ರಗಿರಿ ರಾಜ್ಯದ ಒಂದು ಜಿಲ್ಲೆಯಾಗಿದ್ದಿತು

ಈ ಶಾಸನಗಳಿಂದಾಗಿ ಈತನ ಆಡಳಿತ ಪ್ರತಿನಿಧಿಗಳಿಬ್ಬರು ದೇವಣ್ಣ ಒಡೆಯರ್ ಹಾಗೂ ಮಲ್ಲಣ್ಣ ನಮಗೆ ತಿಳಿ ಪರಿಚಿತರಾಗಿದ್ದಾರೆ. ಇನ್ನೂ ಮೂವರು ಪ್ರಮುಖ ವ್ಯಕ್ತಿಗಳು - ಮಹಾಮಂಡಲೇಶ್ವರ ರಸಾಳ್ವಪೇರಿ ಮಲ್ಲಯ್ಯದೇವ ಮಹಾರಾಜ, ಆಳುತ್ತಿದ್ದ ರಾಜನ ಬಂಧುವಾದ ತಿಪ್ಪದ ನಾಗಯ್ಯನಾಯಕ ಹಾಗೂ ಪ್ರಾಯಶಃ ದೇವರಾಯನ ತಮ್ಮನಾದ ಶ್ರೀಗಿರೀಶ್ವರರು ಈ ಶಾಸನಗಳಿಂದ ತಿಳಿದುಬರುತ್ತಾರೆ

ಮಲ್ಲಿಕಾರ್ಜುನನ ಬಗ್ಗೆ ಹೇಳುವ ಒಂದೇ ಒಂದು ದಾಖಲೆ ಶಕವರ್ಷ 1371 ಅಥವಾ ಕ್ರಿಶ. 1450 ರಲ್ಲಿನದು ದೊರೆಯುತ್ತದೆ. ಚಂದ್ರಗಿರಿಯಲ್ಲಿ ವಾಸವಾಗಿದ್ದ ನಿಯೋಗಿ ಬ್ರಾಹ್ಮಣರ

ಪಂಗಡಕ್ಕೆ ಸೇರಿದ ರಾಜಮಾಲಿಕಂ ಚೆನ್ನಪ್ಪ ಒಡೆಯರ್‌ಗೆ ತಿರುಪತಿಯ ಇಬ್ಬರು ಶ್ರೀ ವೈಷ್ಣವರು ಒಂದು ಮನೆಯನ್ನೂ ಮತ್ತೊಂದು ಮನೆಯ ಸ್ಥಳವನ್ನೂ ಮಾರಿದ ಬಗ್ಗೆ ಈ ಶಾಸನ ತಿಳಿಸುತ್ತದೆ ಪ್ರಾಯಶಃ ಈ ಚೆನ್ನಪ್ಪ ಒಡೆಯರು ರಾಜರಿಗೆ ಹಾಗೂ ರಾಜಪ್ರತಿನಿಧಿಗಳಿಗೆ ಉತ್ಸವ ಸಮಯಗಳಲ್ಲಿ ಹೂವಿನ ಹಾರಗಳನ್ನು ಒದಗಿಸುವ ರಾಜಾಸ್ಥಾನದ ಉದ್ಯೋಗಿ (ರಾಜ ಮಾಲಿಕಂ) ಯಾಗಿದ್ದಿರಬೇಕು.

ತಿರುಪತಿ ಹಾಗೂ ಚಂದ್ರಗಿರಿಗಳು ಏಳು ಮೈಲಿಯ ಅಂತರದಲ್ಲಿದ್ದರೂ ಈ ಶಾಸನ ಹೇಳುವಂತೆ ಎರಡೂ ಗ್ರಾಮಗಳೂ, ತಿರುವೆಂಕಟ ಕೋಟ್ಟಂ ನ ಎರಡು ಬೇರೆ ಬೇರೆ ಉಪವಿಭಾಗಗಳಲ್ಲಿ - ತಿರುಪತಿಯು ತಿರುಕ್ಕುಡುವೂರು ನಾಡಿನಲ್ಲಿಯೂ, ಚಂದ್ರಗಿರಿಯು ವೈಕುಂಠ ವಲನಾಡುವಿನಲ್ಲಿಯೂ ಇದ್ದವು.

ಮಲ್ಲಿಕಾರ್ಜುನನಕಾಲದಲ್ಲಿ ಮೊದಲ ವಂಶದ ಪ್ರಾಬಲ್ಯ ಕ್ಷೀಣಿಸುವುದು ಆರಂಭವಾಯಿತು ಸಾಳುವ ಸಾಮಂತರು ಆಡಳಿತದ ಸೂತ್ರಗಳನ್ನು ಸ್ವತಂತ್ರವಾಗಿ ಹಿಡಿಯತೊಡಗಿದರು.

ಈ ಕಾಲದಲ್ಲಿ ಮೂವರು ಪ್ರಮುಖ ಸಾಳುವರು - ಸಾಳುವ ನರಸಿಂಹನನ್ನೂ ಸೇರಿಸಿಕೊಂಡು - ಕಂಡುಬರುತ್ತಾರೆ. ಮಲೆಗಂಗಯ ದೇವ ಮಹಾರಾಜನ ಮಗನಾದ ಸಾಳುವ ಸಿರು - ಮಲ್ಲಯ್ಯದೇವನು ಶಕ 1372 ರಲ್ಲಿ ಆಲಯದ ಹಲವು ಪೂಜೆಗಳಿಗಾಗಿ, ಹಣವನ್ನು ನೀಡಿದನು. ಎರ್ರಕಂಪಯದೇವ ಮಹಾರಾಜನ ಮಗನೂ, ಎರಡನೇ ದೇವರಾಯನ ಕಾಲದಲ್ಲಿ ಕಂಡುಬಂದ ಪೆರಿ ಮಲ್ಲಯ್ಯದೇವ ಮಹಾರಾಜನ ಸಹೋದರನಾದವನೂ ಆದ ಸಾಳುವ ಮಲ್ಲಯ್ಯದೇವ ಮಹಾರಾಜನು ಶಕ ವರ್ಷ 1375 ರಲ್ಲಿ ಚಂದ್ರಗಿರಿ ರಾಜ್ಯದ ಎಳಂಬಕ್ಕಂ ಗ್ರಾಮವನ್ನು ಅದರ ಸಮಸ್ತ ಉತ್ಪನ್ನ, ತೆರಿಗೆಗಳ ಸಮೇತ ದಾನ ನೀಡಿದ್ದೇ ಅಲ್ಲದೆ, ದೇವದಾನದ ಗ್ರಾಮದಲ್ಲಿನ ಎರಡು ನೀರಾವರೀ ಕಾಲುವೆಗಳನ್ನೂ ತೋಡಿಸಿದನು (ತಿ.ತಿ. 157 ಸಾಳುವ ಮಲ್ಲಯ್ಯ ದೇವನ ಈ ದಾನವು ಆ ಕಾಲಕ್ಕೆ ಆತನು ಚಂದ್ರಗಿರಿ ರಾಜ್ಯದ ರಾಜ್ಯಪಾಲನಾಗಿ ಹೆಸರಿಗೆ ಸಾಮ್ರಾಟನ ಕೈಕೆಳಗಿದ್ದರೂ, ಹೆಚ್ಚು ಕಡಿಮೆ ಸ್ವತಂತ್ರನಾಗಿದ್ದನೆಂದು ತಿಳಿಸುವುದು. ಇನ್ನೊಬ್ಬ ಸಾಳುವ ಪ್ರಮುಖನೆಂದರೆ ಈ ಮಲ್ಲಯ್ಯದೇವ ಮಹಾರಾಯನ ಮಗನಾದ ಸಾಳುವ ರಾಮಚಂದ್ರರಾಜ ಈತನು ಶಕ 1385 ರಲ್ಲಿ (ತಿ ತಿ. 154) ಹಲವು ದಾನಗಳನ್ನು ನೀಡಿದ್ದಾನೆ. ನಂತರದ ಆಡಳಿತದಲ್ಲಿ ಈ ಮಲ್ಲಯ್ಯದೇವನ ಮತ್ತಿಬ್ಬರು ಮಕ್ಕಳು ಕಂಡುಬರುತ್ತಾರೆ ಒಬ್ಬ ಸಾಳುವ ಗೋಪಯ್ಯನು ಶಕ 14391 ರಲ್ಲಿ (ತಿ ತಿ 155) ಕಂಡುಬಂದರೆ ಸಾಳುವ ತಿಮ್ಮರಾಯನು ಶಕ 1403 ರಲ್ಲಿ (ತಿ ತಿ 196) ಕಂಡುಬರುತ್ತಾನೆ ಇವರಲ್ಲಿನ ಕಿರಿಯನು ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ವರಾಹಸ್ವಾಮಿಯವರಿಗೆ ನಿತ್ಯ ನಿವೇದನೆಗಾಗಿ 7800 ಪಣಗಳನ್ನು ನೀಡಿ ತನ್ನ ಔದಾರ್ಯವನ್ನು ಪ್ರಕಟಿಸಿದ್ದಾನೆ ಈ ಆರು ಮಂದಿ ಸಾಳುವರು ಒಂದೇ ಕುಟುಂಬದವರಾಗಿದ್ದು ಒಬ್ಬ ತಂದೆ - ಇಬ್ಬರು ಮಕ್ಕಳು, ಮೂವರು ಮೊಮ್ಮಕ್ಕಳ ಗುಂಪಾಗಿದ್ದಿತು. ಎಲ್ಲರೂ ಮಹಾಮಂಡಲೇಶ್ವರ ಮಹಾರಾಜರೇ ಆಗಿದ್ದರು. ಈ ಕುಟುಂಬ ಸಂಬಂಧ, ಅವರಲ್ಲಿ ಹಿರಿಯ ಶಕ್ತಿಯಾಗಿ ವ್ಯಕ್ತಿಗತವಾಗಿ ಕೆಲಸ ಮಾಡಿದರೂ, ಸಾಮ್ರಾಜ್ಯಕ್ಕೆ ಗಂಡಾಂತರಕಾರಿಯಾಗಿದ್ದಿತು.

ತಿರುಮಲೆಯ ಶಾಸನಗಳಲ್ಲಿ ಕಂಡುಬರುವ ಸಾಳುವ ವಂಶದ ಮತ್ತೊಂದು ಶಾಖೆಯೆಂದರೆ ಗುಂಡಯದೇವ ಮಹಾರಾಜ ಅಥವಾ ಸಾಳುವ ಗುಂಡರಾಜ ಒಡೆಯರ ಹಿರಿತನದಲ್ಲಿನ ಅವನ ಇಬ್ಬರು ಮಕ್ಕಳು ಸಾಳುವ ನರಸಿಂಹ ಹಾಗೂ ಸಾಳುವ ತಿಮ್ಮರಾಜ ಒಡೆಯರದು (ಶಕ 1385 ರ ತಿ.ತಿ 69 ಶಾಸನ) ಸಾಳುವ ನರಸಿಂಹನ ಮೊದಲ ದಾಯಾದಿ ಸಾಳುವ ಪರ್ವತರಾಜ - (ತಿ.ತಿ 55) ಈತ 3 ನೇ ಗುಂಡರಾಜನ ಸೋದರನಾದ ಎರಡನೇ ಗೌತನ ನಾಲ್ಕು ಮಂದಿ ಮಕ್ಕಳಲ್ಲಿ ಒಬ್ಬನಾದ ಸಾಳುವರಾಜನ ಮಗ ಕೊನೆಯದಾಗಿ ಮೂರನೇ ಗುಂಡರಾಜನ ಮೂವರು ಸೋದರರಲ್ಲಿ ಒಬ್ಬನೂ, ಎರಡನೇ ದೇವರಾಯನ ಭಾವನೂ ಆದ ತಿಪ್ಪನ ವಂಶದವನಾದ ನರಸಿಂಹನ ಎರಡನೇ ದಾಯಾದಿ ತ್ರಿಪುರಾಂತಕ ರಾಜನು ದಕ್ಷಿಣದಲ್ಲಿ ರಾಜ್ಯ ಭಾರಮಾಡುತ್ತಿದ್ದಿರಬೇಕು

## ಸಾಳುವರ ಕಾಲದಲ್ಲಿ ಆಲಯ :

ಶಕವರ್ಷದ 14 ನೇ ಶತಮಾನದ ಕೊನೆಯಲ್ಲಿ ವಿಜಯನಗರ ಸಾಮ್ರಾಜ್ಯವು ಸೇನಾನಿಗಳು, ರಾಜ ಪ್ರಮುಖರು, ರಾಜ್ಯಪಾಲರುಗಳು, ರಾಜಪ್ರತಿನಿಧಿಗಳಿಂದ ಕೂಡಿದ್ದು ಕುಲ, ಗೋತ್ರಗಳ ಸಮರಾಂಗಣವಾಗಿ, ಜೀರ್ಣವಾಗುವ, ಕ್ಷೀಣವಾಗುವ ದೆಸೆಗೆ ಮುಟ್ಟಿದ್ದಿತು ಬಲಶಾಲಿಗಳಾಗಿದ್ದವರು ಬಲಹೀನರನ್ನು ಮೂಲೆಗೊತ್ತಿ, ಐಶ್ವರ್ಯ, ಅಧಿಕಾರ, ಮರ್ಯಾದೆ, ಗೌರವಗಳನ್ನು ಸಂಪಾದಿಸಲು ಸಾಕಷ್ಟು ಅವಕಾಶವಾಯಿತು ವಿಜಯನಗರದ ಮೊದಲವಂಶದ ಕಡೆಯರಾಜ ವಿರೂಪಾಕ್ಷನ ಕಾಲಕ್ಕೆ ಈ ಸ್ಥಿತಿಯನ್ನು ಸಾಮ್ರಾಜ್ಯ ಮುಟ್ಟಿರಬೇಕು.

ಈ ಕಾಲದ ರಾಜಕೀಯ ಚಿತ್ರವನ್ನು ಕಟ್ಟಿಕೊಡಲು ಸಾಧ್ಯವಿದೆ ಆದರೂ ಘಟನಾವಳಿಗಳ ಕಾಲಕ್ರಮದಲ್ಲಿ ಯಾವುದೇ ಒಂದು ಖಚಿತವಾದ ನಿರ್ಧಾರಕ್ಕೂ ಬರುವಂತಿಲ್ಲ ಶಕ ವರ್ಷದ 15 ನೇ ಶತಮಾನದ ಮೊದಲದಶಕದ ಹೊತ್ತಿಗೆ ವಿರೋಧಿಗಳನ್ನು ಬದಿಗೊತ್ತಿ ಸಾಮ್ರಾಜ್ಯದ ಆಡಳಿತ ಚುಕ್ಕಾಣಿಯನ್ನು ಹಿಡಿದು ಸಾಳುವ ನರಸಿಂಹನು ರಾಜ್ಯದ ಹಡಗನ್ನು ಉಲ್ಲೋಲ ಕಲ್ಲೋಲಗಳಿಂದ ಹೊರಕ್ಕೆ ತರುವಲ್ಲಿ ಸಫಲನಾದನೆಂಬುದು ಸ್ಪಷ್ಟ. ತನ್ನ ಸೇನಾಧಿಪತಿ, ಮಂತ್ರಿಗಳ ವಿಶ್ವಾಸಾರ್ಹವಾದ ನೆರವಿನಿಂದಾಗಿ ರಾಜ್ಯದಲ್ಲಿ ಅತ್ಯಂತ ಪ್ರಮುಖ ಸ್ಥಾನವನ್ನು - ಪ್ರಧಾನಮಂತ್ರಿ ಪದವಿಯನ್ನು ಅಲಂಕರಿಸಿ - ಆ ಕಾಲದ ವಿಜಯನಗರ ಸಾಮ್ರಾಜ್ಯದ ಅಧಿಕಾರಿಗಳಲ್ಲಿ ಅತಿಪ್ರಧಾನನಾದನು ಆತ ತನ್ನ ಜೊತೆಯವರೊಡನೆ ಕಲಹ ಮಾಡಿರಲಿಲ್ಲವೆಂಬುದೂ, ಅವರನ್ನು ಯುದ್ಧದಲ್ಲಿ ಗೆದ್ದಿರಲಿಲ್ಲವೆಂಬುದೂ ಸ್ಪಷ್ಟ. ಆತ ನಿಧಾನವಾಗಿ ರಾಜ್ಯದ ಸೀಮೆಗಳನ್ನು ವಿಸ್ತರಿಸುತ್ತ ಎಲ್ಲವನ್ನೂ ಸುಸ್ಥಿರಗೊಳಿಸಿಕೊಳ್ಳುತ್ತ ಹೊರಟ. ಅತ್ಯುನ್ನತವಾದ ಪ್ರಧಾನಿಯ ಪದವಿಯ ಮೂಲಕ ಆಡಳಿತದ ಎಲ್ಲ ಸೂತ್ರಗಳನ್ನೂ ಕೈಯಲ್ಲಿ ಹಿಡಿದು ಬಿಗಿ ಮಾಡುತ ಹೊರಟ. ಆತನ ಶೌರ್ಯ ಪರಾಕ್ರಮಗಳಿಗಿಂತ ಆತನ ಸಮಯಪ್ರಜ್ಞೆಯೇ ಆತನನ್ನು ನಾಶದಂಚಿಗೆ ಹೋಗದಂತೆ ಕಾಪಾಡಿರಬೇಕು. ಭೇದಬುದ್ಧಿಯಿಂದ ತನ್ನ ಸೇನಾನಿಗಳಾದ ತುಳುವ ನರಸ ಹಾಗೂ ಅವನ ಮಗ ವೀರನರಸಿಂಹರುಗಳನ್ನು ಪೆನುಗೊಂಡೆಯಕೋಟೆಯಲ್ಲಿ ಬಂಧಿಸಿದರೂ, ಅವರು ಈತನ ಮಗ ಇಮ್ಮಡಿ ನರಸಿಂಹನ ಮೇಲೆ ಇದೇ ಪದ್ಧತಿಯನ್ನು ಪ್ರಯೋಗಿಸಿದರು. ಈತನ ಹಿರಿಮೆಯೆಂದರೆ ಸಾಮ್ರಾಜ್ಯವನ್ನು ವಿಸ್ತರಿಸಿ ಅದನ್ನು ವಿಜಯನಗರದ ಅರಸರಲ್ಲಿ ಅತಿ ಪ್ರಸಿದ್ಧನಾದ ಕೃಷ್ಣರಾ

ಮನಿಗೆ ಸುರಕ್ಷಿತವಾಗಿ ತಲುಪಿಸಿದ್ದು. ಆತ ದನ್ನು ಇನ್ನೂ ವಿಸ್ತರಿಸಿ, ಏಕೀಕರಿಸಿ, ಪ್ರಬಲ ಗೊಳಿಸಿ, ತನ್ನ ನಂತರವೂ ಎರಡು ತಲೆಮಾ ರುಗಳ ಕಾಲ ಪ್ರಬಲ ಸಾಮ್ರಾಜ್ಯವಾಗಿರುವಂತೆ ಟ್ಟಿ ಬೆಳೆಸಿದ. ಮಲ್ಲಿಕಾರ್ಜುನನ ಕಾಲದಲ್ಲಿ ರ್ಧಸ್ವತಂತ್ರನಾಗಿದ್ದು ದಕ್ಷಿಣದಲ್ಲಿ ತನ್ನ ಅಧಿಕಾ ರವನ್ನು ಕ್ರಮೇಣ ಉತ್ತರ ದಕ್ಷಿಣ ಆರ್ಕಾಡುಗಳ, ಚಿತ್ತೂರು, ವೆಲ್ಲೂರು, ಚೆಂಗಲ್‌ಪೇಟೆಗಳಿಗೆ ವಿಸ್ತ ರಿಸಿ, ವಿಜಯನಗರದ ಮೊದಲ ವಂಶದ ಕಡೆಯ ರಸನಿಗೆ ಹೆಸರಿನಲ್ಲಿ ಪ್ರಧಾನಮಂತ್ರಿಯಾಗಿದ್ದ ಸಾಳುವ ನರಸಿಂಹನು ನಿಜವಾಗಿ ತಾನೇ ರಾಜ ನಾದ. ಶಕವರ್ಷ 1378 ರಿಂದ 1411 ರ ವರೆಗಿನ ಆಲಯ ಶಾಸನಗಳಲ್ಲಿನ ಹದಿನಾಲ್ಕು ಶಾಸನಗಳು ಇವನ ಕಾಲದವಾಗಿದ್ದು, ಈತ ಸಾಮ್ರಾಟನ ಕೈಕೆಳಗಿನವ ಮಾತ್ರವೇ ಎಂಬು ದನ್ನು ಸೂಚಿಸುವ ಮಹಾಮಂಡಲೇಶ್ವರ ಎಂಬ ಸ್ಥಾನ ಮರ್ಯಾದೆಯನ್ನು ಮಾತ್ರವೇ ಸೂಚಿಸಲಾ ಗಿದೆ. ಇತರ ಬಿರುದುಗಳಾದ ಮೇದಿನೀ ಮೀಸರ ಗಂಡ, ಕಠಾರಿಸಾಳುವ - ಮೊದಲಾದವು ಸಾಳುವ ರಿಗೆಲ್ಲ ಸಾಮಾನ್ಯವಾಗಿ ಸಲ್ಲತಕ್ಕವು. ಈತ ಸಾಳುವ ಗುಂಡಯ್ಯದೇವ ಮಹಾರಾಜ ಹಾಗೂ ಮಲ್ಲಾಂ ಬಿಕೆಯರ ಮಗ ಆಗಿದ್ದು (197 ತಿ.ತಿ.) ಈತ ನಿಗೆ ಸಾಳುವ ತಿಮ್ಮರಾಜದೇವ ಮಹಾರಾಜ ಒಡೆ ಯರ್ ಎಂಬ (ತಿ.ತಿ. 69) ಹೆಸರಿನ ಅಣ್ಣನೊಬ್ಬ ನಿದ್ದ. ಈತನ ರಾಣಿ ಶ್ರೀರಂಗದೇವಿ ಅಮ್ಮನ್ (ತಿ.ತಿ 341) ಮೂವರು ಪುತ್ರರಿದ್ದರು. ಕುಮಾರ ನರಸಯ್ಯ, ಚಿಕ್ಕ ಸಂಗಮ ಹಾಗೂ ದೊಡ್ಡ ಸಂಗಮ

ಸಾಳುವರ ಕಾಲದಲ್ಲಿ ಆಲಯದಲ್ಲಿ ಹಲವು ಉತ್ಸವಗಳು - ಅಧ್ಯಯನೋತ್ಸವ, ಪವಿತ್ರೋ ತ್ಸವ, ಕೋಡೈ ತಿರುನಾಳ್ ಮೊದಲಾದವು - ಪುನಃ ಪ್ರವೇಶಗೊಳಿಸಲ್ಪಟ್ಟವು.

ಈ ಕಾಲದ ಅತಿ ಮಹತ್ವದ ಸಂಘಟನೆ ಯೆಂದರೆ ಪಶಿಂದಿ ವೆಂಕಟತ್ತುರೈವರ್ ಅಲಿ ಯಾಸ್ ಜೀಯರ್ ರಾಮಾನುಜಯ್ಯನ್ ಸಂಗ್ರಹಿ ಸಿದ "ತಿರುವೆಂಕಟ ಮಹಾತ್ಮೆ". ವಿವಿಧ ಪುರಾಣ ಸಂಗ್ರಹವಾದ, ಈ ಕೃತಿಯನ್ನು ಕೃತಿಕಾರನು ತಿರುಕ್ಕುನಿಯ ನಿನ್ರಪೆರುಮಾಳ್ ಹಾಗೂ ನಾಚ್ಚಿ ಯಾರರ ಸನ್ನಿಧಿಯಲ್ಲಿ 27-6-1491 ರಂದು ಪ್ರಥಮ ಬಾರಿಗೆ ಪ್ರವಾಚಿಸಿದನು. ತಿರುಮಲೆಯ ಪರ್ವತದ ತಿರುವೆಂಗಡ ಮುಡೈಯಾನನ ಅವ ತಾರಕ್ಕೆ ಒಂದು ಪೌರಾಣಿಕ ಹಿನ್ನೆಲೆಯನ್ನು ವಿವ ರಿಸಿ, ಹಿಂದೂ ಸಮುದಾಯದ ಧಾರ್ಮಿಕ ಭಾವ ನೆಗಳಿಗೆ ಇಂಬುಕೊಡುವುದೇ ಕೃತಿಕಾರನ ಉದ್ದೇ ಶವಾಗಿದ್ದಿತು.

ಮುಂದಿನ ತಲೆಮಾರುಗಳಿಗೆ ಅತಿ ಹತ್ತಿರ ವಾದ ಈ ಕಾಲದ ಮತ್ತೊಂದು ಸಂಘಟನೆ ಯೆಂದರೆ ಮೂಲವರರ ಪುನುಗುಕಾಪ್ಪು ಅಭಿ ಷೇಕ, ಆಲಯದಲ್ಲಿ ತಯಾರಿಸಿದ ಸುಗಂಧಿತ ವಾದ ಪುನುಗು ಎಣ್ಣೆಯಿಂದ ಸ್ವಾಮಿಯನ್ನು ಅಭಿ ಷೇಕಿಸುವುದು ಇಲ್ಲಿನ ವಿಶೇಷ.

ಕ್ರಿಶ. 1434 ರಲ್ಲಿ ತಿರುಕ್ಕಲಿ ಕನ್ರಿದಾ ಸರು (ತಿರುಪತಿಯವರು) ಆಡಿಮಾಸದಿಂದ ಮಾರ್ಗಳಿ ಮಾಸದ ವರೆಗೆ ಆರುತಿಂಗಳಕಾಲ ದಿನವೂ ಪ್ರಾತಃಕಾಲ ತಿರುವಾರಾಧನೆ (ನಿತ್ಯಾ ರ್ಚನೆ) ಮಾಡುವಾಗ ಪೆರಿಯ ಪೆರುಮಾಳ ಸ್ವಾಮಿಯ ಮುಖಕ್ಕೆ ಪುನುಗು ಎಣ್ಣೆಯನ್ನು ಪೂಸುವ ಪದ್ಧತಿಯನ್ನು ಆರಂಭಿಸಿದರು ಪ್ರತಿದಿ ನವೂ ಬೆಳ್ಳಿಯ ಮಣವಾಳ ಪೆರುಮಾಳರಿಗೆ ತಿರು ಮಂಜನ ಮಾಡುವ ಸಮಯದಲ್ಲಿ ಪ್ರಾಯಶಃ ಈ ಪ್ರಕ್ರಿಯೆಯನ್ನು ಉಂಟಾಗಿಸಿರಬೇಕು ತಿರು ವಾರಾಧನೆಗೆ ಬಳಸುವ ನೀರಿಗೆ ಸುಗಂಧ ದ್ರವ್ಯಗ ಳನ್ನು ಬಳಸುವ ಮೂಲಕ ಪ್ರಾಚೀನ ಕಾಲದಿಂದ ನಡೆಯುತ್ತಿದ್ದ ಬೆಳ್ಳಿಯ ಮೂರ್ತಿಯ ತಿರುಮಂ ಜನವನ್ನು ಭಕ್ತರಲ್ಲಿ ಆಕರ್ಷಕ ಗೊಳಿಸಿದ್ದಾಗಿರ ಬೇಕು. ಕ್ರಿಶ 1465 ರಲ್ಲಿ ಕಂದಾಡೈ ರಾಮಾ ನುಜ ಅಯ್ಯಂಗಾರ್ಯನಿಂದ ಈ ಪದ್ಧತಿ ಆರಂಭ ವಾಗಿದ್ದು, ಸಾಳುವ ನರಸಿಂಹ ದೇವ ಮಹಾರಾ ಯನು ತಕ್ಕ ಧನಮೂಲವನ್ನು ಒದಗಿಸಿದನು. ಈ ತಿರುಮಂಜನವನ್ನು ಅಳಗಪ್ಪಿರನಾರ್ ತಿರು ಮಂಜನವೆಂದು ಕರೆಯಲಾಯಿತು.

ಸಾಳುವ ನರಸಿಂಹನು ಕ್ರಿಶ. 1482 ರಲ್ಲಿ ತೀರಿಕೊಂಡನಂತರ ಅವನ ಮಗ ಇಮ್ಮಡಿ ನರ ಸಿಂಹನು ಕ್ರಿಶ. 1505 ರ ವರೆಗೆ ಆಡಳಿತ ನಡೆಸಿದ ಇವನೊಡನೆ ಸಾಳುವ ವಂಶ ಕೊನೆ ಗೊಂಡಿತು ಇಮ್ಮಡಿ ನರಸಿಂಹನು ಸಿಂಹಾಸನ ಚ್ಯುತನಾಗಿದ್ದಾಗ ಸಾಳುವನರಸಿಂಹನ ದಂಡನಾ ಯಕನಾದ ನರಸನಾಯಕನೇ ನಿಜವಾದ ಸಾಮ್ರಾ ಟನಾಗಿದ್ದ. ಇವನ ಮರಣದವರೆಗೆ ಎಂದರೆ 1509 ರ ವರೆಗೆ ಈತನ ಮಗ ವೀರನರಸಿಂಹನು ಸಾಮ್ರಾಟನೆಂದು ಆಳ್ವಿಕೆ ನಡೆಸಿದನು.

ತಿರುಮಲೆಯ ಆಲಯದ ಹಲವು ಶಾಸನ ಗಳು ಈ ಕಾಲದ ರಾಜನ ಅಧಿಕಾರಿಗಳನ್ನು ಗುರು ತಿಸುತ್ತದೆ.

(ಮುಂದಿನ ಸಂಚಿಕೆಯಲ್ಲಿ -
- ತುಳುವರ ಕಾಲದಲ್ಲಿ ಆಲಯ.)

* * *



# ತಿರುಮಲೆಯಲ್ಲಿನ ಸೌಕರ್ಯಗಳು

**ಕಾಲುಹಾದಿಯಲ್ಲಿ ಬೆಟ್ಟವನ್ನೇರುವವರಿಗೆ ಇರುವ ಸೌಕರ್ಯಗಳು :**

ಅಸಂಖ್ಯಾತ ಯಾತ್ರಿಕರು ತಮ್ಮ ಹರಕೆಯ ಭಾಗವಾಗಿ ತಿರುಮಲೆಯನ್ನು ಕಾಲುಹಾದಿಯ ಮೂಲಕ ಏರಿ ತಲುಪುತ್ತಾರೆ ಅವರ ಅನುಕೂಲಕ್ಕಾಗಿ ತಿ ತಿ.ದೇ ಗಳು ಹಲವು ಸೌಕರ್ಯಗಳನ್ನುಂಟಾಗಿಸಿವೆ

* ಬೆಟ್ಟವನ್ನು ಹತ್ತುವ ಯಾತ್ರಿಕರಿಗಾಗಿ ತಿರುಪತಿಯ ರೈಲ್ವೆ ನಿಲ್ದಾಣದಿಂದ ಕೇಂದ್ರ ಬಸ್‌ನಿಲ್ದಾಣ ಕಪಿಲತೀರ್ಥಗಳ ಮೂಲಕ ಹಾದು ಅಲಿಪಿರಿಯನ್ನು ತಲುಪುವಂತೆ ಎರಡು ಬಸ್‌ಗಳನ್ನು ಉಚಿತವಾಗಿ ಹೊರಡಿಸಲಾಗುತ್ತಿದೆ ಈ ಉಚಿತ ಪ್ರಯಾಣದ ಬಸ್‌ಗಳು ಬೆಳಗ್ಗೆ 4-00 ಗಂಟೆಯಿಂದ ರಾತ್ರಿ 11-00 ಗಂಟೆಯವರೆಗೆ ಅರವತ್ನಾಲ್ಕು ಬಾರಿ ನಡೆಯುತ್ತವೆ.
* ತಿರುಪತಿಯ ಸತ್ರಗಳಿಂದ / ಅಲಿಪಿರಿಯಿಂದ ತಿರುಮಲೆಗೆ ಯಾತ್ರಿಕರ ಸಾಮಾನುಗಳನ್ನು ಬೆಟ್ಟಕ್ಕೆ ಉಚಿತವಾಗಿ ಸಾಗಿಸಲಾಗುವುದು
* ಗಾಳಿಗೋಪುರ, ಚಿಟ್ಟಿಯೆಕ್ಕುಡು, ಮಾಮಂಡೂರು ಮಿಟ್ಟ, ನರಸಿಂಹಸ್ವಾಮಿ ಗುಡಿ, ಮೋಣಕಾಲು ಮುರಿ ಮೊದಲಾದೆಡೆಗಳಲ್ಲಿ ಅಡಿಗೆ ಮಾಡಿಕೊಳ್ಳುವ ಏರ್ಪಾಡು
* ಕಾಲುಹಾದಿಯುದ್ದಕ್ಕೂ ಕುಡಿಯುವ ನೀರಿನ ಸೌಲಭ್ಯವಿದೆ
* ಕಾಲುಹಾದಿಯಲ್ಲಿ ಶೌಚಗೃಹಗಳೂ ಉಂಟು
* ಮುಖ್ಯವಾದ ಆಯಕಟ್ಟಿನ ಸ್ಥಳಗಳಲ್ಲಿ ವಿಶ್ರಾಂತಿ ಪಡೆಯಲು ನೆರಳಿನ ವ್ಯವಸ್ಥೆ
* ವಂಚಕರು, ಮೋಸಗಾರರ ಪಾಲಿಗೆ ಸಿಕ್ಕಿ ಯಾತ್ರಿಕರು ವಂಚಿತರಾಗದಂತೆ ನೋಡಿಕೊಳ್ಳಲು ಹಗಲು ರಾತ್ರಿ ಸಂರಕ್ಷಕ ಭಟರ, ಗೂರ್ಖಾಗಳ, ಪೋಲೀಸರ ಕಾವಲು ಪಹರೆ
* ಸ್ಥಳೀಯ ಪ್ರಸಾರ ಪದ್ಧತಿಯಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರ

**ಸರದಿಯ ಸಾಲಿನಲ್ಲಿ ಯಾತ್ರಿಕರ ಸೌಲಭ್ಯಗಳು :**

ಸರದಿಯ ಸಾಲಿನ ಕೋಣೆಗಳಲ್ಲಿ ಸ್ವಾಮಿಯ ದರ್ಶನಕ್ಕೆಂದು ಯಾತ್ರಿಕರು ಕಾಯುವ ಸಮಯವನ್ನು ಕಡಿಮೆ ಮಾಡುವಂತಹ ಅನೇಕ ಹೊಸಹೊಸ ಕ್ರಮಗಳನ್ನು ತಿ ತಿ ದೇವ ಸ್ಥಾನಗಳು ಆಲಯದ ದೈನಂದಿನ ಸೇವೆಗಳಲ್ಲಿ ಪ್ರವೇಶಗೊಳಿಸಿವೆ ಜೊತೆಗೇ ಕಾಯುವ ಕೋಣೆಗಳಲ್ಲಿ ಯಾತ್ರಿಕರಿಗೆ ಬೇಸರವಾಗದಂತೆ ಅವರ ಮನಸ್ಸಿಗೆ ಉಲ್ಲಾಸವಾಗುವಂತೆ ಈ ಕೆಲವು ಕ್ರಮಗಳನ್ನೂ ಕೈಗೊಳ್ಳಲಾಗಿದೆ.

* ಗಾಳಿ ಬೆಳಕುಗಳ ವಿಶಾಲವಾದ ಆರೋಗ್ಯಕರವಾದ ವಿದ್ಯುತ್ ಪಂಖಗಳಿಂದ ಕೂಡಿದ ಕಾಯುವ ಕೋಣೆಗಳು
* ತಿ.ತಿ.ದೇ ಕ್ಯಾಂಟೀನಿನಿಂದ ಒಳಗಡೆ ಅಲ್ಪೋಪಹಾರ ಸೌಲಭ್ಯ
* ಆಹಾರದ ಪೊಟ್ಟಣಗಳು ಸರಸವಾದ ದರಗಳಲ್ಲಿ ಸಿಗುವ ಏರ್ಪಾಡು
* ಆಂಧ್ರಪ್ರದೇಶ ಡೈರಿ ಅಭಿವೃದ್ಧಿ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಪ್ರಥಮ ಚಿಕಿತ್ಸೆ
* ಸರದಿಯ ಸಾಲಿನ ಕೋಣೆಗಳಲ್ಲಿ ಶೌಚಗೃಹ ವ್ಯವಸ್ಥೆ.
* ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ ಕಾರ್ಯಕ್ರಮಗಳು
* ಭಕ್ತಿ ಸಂಗೀತ, ಹರಿಕಥೆ ಮೊದಲಾದವುಗಳ ಪ್ರಸಾರ
* ವೈಕುಂಠಂ ಕ್ಯೂಕಾಂಪ್ಲೆಕ್ಸ್ ಸಮೀಪದಲ್ಲಿ ಯಾತ್ರಿಕರು ತಮ್ಮ ವಸ್ತುಗಳನ್ನು ಸುರಕ್ಷಿತಗೊಳಿಸಬಹುದು ಸರದಿಯ ಸಾಲಿನಲ್ಲಿ ನಡೆಯುತ್ತ ಸರಂಜಾಮುಗಳನ್ನು ಹೊತ್ತು ನಡೆಯಬೇಕಾಗಿಲ್ಲ
* ಸರದಿಯ ಸಾಲಿಗೆ ಸೇರುವ ಸ್ಥಳಗಳಲ್ಲಿ ಪಾದರಕ್ಷೆಗಳನ್ನು ಭದ್ರಪಡಿಸುವ ಸೌಲಭ್ಯವಿದೆ
* ವಂಚಕ ದಳ್ಳಾಳಿಗಳಿಂದ ಉದ್ಯೋಗಿಗಳ ಭ್ರಷ್ಟತೆಯನ್ನು ನಿವಾರಿಸಲು ಆಲಯದ ಮಹಾದ್ವಾರದಲ್ಲಿ ಒಬ್ಬ ಅಧಿಕಾರಿಯ ನೇಮಕ ಇವರು ದೂರುಗಳನ್ನೂ ವಿಚಾರಿಸುವರು.
* ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಯಾತ್ರಿಕರ ಅನುಕೂಲಗಳನ್ನು ನೋಡಿಕೊಳ್ಳಲು ಒಬ್ಬ ಅಧಿಕಾರಿಯ ನೇಮಕ

**ಇತರ ಸೌಲಭ್ಯಗಳು :**

* ತಿರುಪತಿಯ ತಿರುಚಾನೂರು ರಸ್ತೆಯಲ್ಲಿನ ಶ್ರೀನಿವಾಸ ಕಲ್ಯಾಣ ಮಂಟಪಗಳಲ್ಲಿ ನಾಲ್ಕು ಮದುವೆಯ ಮಂಟಪಗಳಿದ್ದು ಇಲ್ಲಿ ಗ್ಯಾಸ್ ಒಲೆ ಮೊದಲಾದ ಆಧುನಿಕ ಸೌಲಭ್ಯ ಗಳುಂಟು ಸರಸವಾದ ಸೇವಾಶುಲ್ಕದ ಈ ಕಲ್ಯಾಣಮಂಟಪಗಳ ಬಾಡಿಗೆಯ ಕಾಲವ್ಯವಧಿ ಮಧ್ಯಾಹ್ನ 3 ರಿಂದ ಮಧ್ಯಾಹ್ನ 3 ಗಂಟೆ ಶ್ರೀನಿವಾಸಕಲ್ಯಾಣ ಮಂಟಪದ ಎದುರು ಶ್ರೀ ಪದ್ಮಾವತೀ ಕಲ್ಯಾಣಮಂಟಪಗಳ ಸಮುದಾಯದಲ್ಲಿ ಹೆಚ್ಚು ಕಲ್ಯಾಣ ಮಂಟಪಗಳುಂಟು

  ಎಸ್.ವಿ. ಅತಿಥಿಗೃಹ ಕ್ಯಾಂಟೀನ್ ತಿರುಮಲೆಯ ಎಸ್ ವಿ ಅತಿಥಿಗೃಹದ ಕ್ಯಾಂಟೀನ್‌ನಲ್ಲಿ ಸರಸದರಗಳಲ್ಲಿ ಆರೋಗ್ಯಕರವಾದ ಸಂತುಲಿತ ಊಟ ಉಪಹಾರಗಳು ದೊರೆಯುತ್ತವೆ

  ಉಚಿತ ಭೋಜನ ಸ್ವಾಮಿಯನ್ನು ದರ್ಶಿಸಿ ಹೊರಬರುವಾಗ ಆಲಯದಲ್ಲಿ ನೀಡಲಾಗುವ ಉಚಿತ ಭೋಜನ ಚೀಟಿಗಳ ವಿತರಣೆಯ ಮೂಲಕ ತಿರುಮಲೆಯ ತಿ ತಿ ದೇ ಕ್ಯಾಂಟೀನ್‌ನಲ್ಲಿ ಬೆಳಗ್ಗೆ 10-00 ಗಂಟೆಯಿಂದ ರಾತ್ರಿ 1-00 ಗಂಟೆಯವರೆಗೆ ಉಚಿತವಾಗಿ ಸಂತುಲಿತ ಭೋಜನ ನೀಡಲಾಗುತ್ತದೆ

  ಉಚಿತ ವೈದ್ಯಕೀಯ ಚಿಕಿತ್ಸೆ ಶೇಷಾದ್ರಿನಗರದ ಬಳಿಯ ಅಶ್ವಿನಿ ಆಸ್ಪತ್ರೆಯಲ್ಲಿ ಯಾತ್ರಿಕರಿಗೆ ಉಚಿತವಾಗಿ ವೈದ್ಯ ಸೌಲಭ್ಯ ದೊರೆಯುತ್ತದೆ

  ಅಂಚೆ ಮತ್ತು ತಂತಿ ಕೇಂದ್ರ ಸ್ವಾಗತಕಚೇರಿಯ ಬಳಿ ಅಂಚೆ ಕಚೇರಿ, ತಂತಿ ಕಚೇರಿಗಳಿವೆ

  ಉಚಿತ ಬಸ್ ತಿರುಮಲೆಯಲ್ಲಿ ಕಾಟೇಜುಗಳು, ಸತ್ರಗಳು, ಆಲಯ ಮೊದಲಾದವನ್ನು ಮುಟ್ಟುವಂತೆ ಉಚಿತ ಬಸ್‌ಗಳ ಓಡಾಡುತ್ತವೆ.

  ಏರ್‌ಲೈನ್ಸ್ ಕೋಚು ತಿರುಪತಿಯ ಬಳಿಯ ವಿಮಾನ ನಿಲ್ದಾಣದಿಂದ ತಿರುಮಲೆಗೆ ಹಾಗೂ ಹಿಂದಕ್ಕೆ ವಿಮಾನಯಾತ್ರಿಕರ ಅನುಕೂಲಕ್ಕಾಗಿ ಎ.ಪಿ ಎಸ್ ಆರ್.ಟಿ.ಸಿ. ಯವರು ಲಕ್ಸುರಿ ಕೋಚನ್ನು ನಡೆಸುತ್ತಾರೆ

  ಚಿನ್ನ ಹಾಗೂ ಬೆಳ್ಳಿ ಪದಕಗಳ ಮಾರಾಟ ತಿರುಮಲೆಯ ಆಲಯದ ಒಳಗಡೆ ಸ್ವಾಮಿಯ ಹುಂಡಿಯ ಎದುರು ಭಾಗದಲ್ಲಿ, ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಚಿತ್ರಗಳಿರುವ ಚಿನ್ನ ಹಾಗೂ ಬೆಳ್ಳಿಯ ಪದಕಗಳನ್ನು ಕೊಂಡುಕೊಳ್ಳಬಹುದು

  ಕಲ್ಯಾಣಕಟ್ಟೆ ತಿರುಮಲೆಯ ಕಲ್ಯಾಣಕಟ್ಟೆಯಲ್ಲಿ ಯಾತ್ರಿಕರು ತಮ್ಮ ಹರಕೆಯ ಕೂದಲನ್ನು ಉಚಿತವಾಗಿ ನೀಡಬಹುದು ಕಾಟೇಜುಗಳ ಬಳಿಯಲ್ಲಿ ಇದಕ್ಕೆ 10 ರೂಪಾಯಿ ಶುಲ್ಕ

  ಪ್ರಕಟನೆಗಳ ಮಾರಾಟ ತಿರುಮಲೆಯ ಆರ್.ಟಿ.ಸಿ. ಬಸ್ ನಿಲ್ದಾಣದಲ್ಲಿ ಹಾಗೂ ತಿರುಪತಿಯಲ್ಲಿನ ಮೊದಲಸತ್ರ, ಶ್ರೀ ಗೋವಿಂದರಾಜಸ್ವಾಮಿ ಗುಡಿಯ ಬಳಿಯ ಧ್ಯಾನಮಂದಿರ, ರೈಲ್ವೆ ನಿಲ್ದಾಣಗಳಲ್ಲಿ ತಿ ತಿ ದೇವಸ್ಥಾನಗಳು ಪ್ರಕಟಿಸುವ ಎಲ್ಲ ಗ್ರಂಥಗಳು, ಧ್ವನಿಸುರುಳಿಗಳು, ದೊರೆಯುತ್ತವೆ

  ರೈಲ್ವೆ ಮುಂಗಡ ಕಾಯ್ದಿರಿಸುವಿಕೆ ತಿರುಮಲೆಯ ಕೇಂದ್ರ ಸ್ವಾಗತ ಕಚೇರಿಯಲ್ಲಿರುವ ರೈಲ್ವೆ ಕೌಂಟರಿನಲ್ಲಿ ಬಸ್ - ರೈಲು ಪ್ರಯಾಣಗಳನ್ನು ಮುಂಗಡ ಕಾಯ್ದಿರಿಸಬಹುದು.

  ವಾಹನ ದುರಸ್ತಿ ತಿರುಮಲೆಯ ಹಾದಿಯಲ್ಲಿ ಕೆಟ್ಟು ನಿಲ್ಲುವ ವಾಹನಗಳ ದುರಸ್ತಿಗಾಗಿ ಒಂದು ದುರಸ್ತಿ ವಾಹನವು ಮೆಕ್ಯಾನಿಕ್ ಹಾಗೂ ಉಪಕರಣಗಳೊಂದಿಗೆ ಸಿದ್ಧವಾಗಿರುತ್ತದೆ ತಿರುಪತಿಯ ಅಲಿಪಿರಿ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿ ವಿಚಾರಿಸಿ ಈ ಸೌಲಭ್ಯ ಪಡೆಯಬಹುದು

  ಪುರೋಹಿತ ಸಂಘ ತಿರುಮಲೆಯಲ್ಲಿ ವೈದಿಕ ಕ್ರಿಯೆಗಳನ್ನು ಯಾತ್ರಿಕರು ನಡೆಸಲು ಸುಲಭವಾಗುವಂತೆ, ಈ ಕೆಲಸಗಳನ್ನು ನಿರ್ವಹಿಸಬಲ್ಲ ಪಾಂಡಿತ್ಯ ಅನುಭವಗಳನ್ನುಳ್ಳ ಪುರೋಹಿತರ ಸಂಘವನ್ನು ತಿ ತಿ.ದೇ ಸಂಘಟಿಸಿದೆ ಸದರಿ ಕ್ರಿಯೆಗಳ ಶುಲ್ಕವನ್ನೂ ತಿ ತಿ.ದೇ ನಿರ್ಧರಿಸಿ ಪ್ರಕಟಿಸಿದ ಸಂಕಲ್ಪ, ನಾಮಕರಣ, ಚೌಲ, ಉಪನಯನ, ವಿವಾಹ, ಪಿಂಡಪ್ರದಾನ ಮೊದಲಾದ ವೈದಿಕ ಕ್ರಿಯೆಗಳನ್ನು ಮಾಡಬಯಸುವವರು ಪುರೋಹಿತ ಸಂಘದಲ್ಲಿ ವಿಚಾರಿಸಬಹುದು ತಿ.ತಿ.ದೇ ವಿಚಾರಣಾಕೇಂದ್ರದಲ್ಲಿ ವಿಚಾರಿಸಬಹುದು.



# ಶ್ರೀಕೃಷ್ಣಜನ್ಮಾಷ್ಟಮೀಸಂದೇಶ

- ಶ್ರೀ ಕಾಣಿಯೂರು ಶ್ರೀಪಾದರು.

ಕೃಷ್ಣಾಯ ವಾಸುದೇವಾಯ ದೇವಕೀ ನಂದನಾಯ ಚ
ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ

**ಈ ದಿನ ತುಂಬಾ** ಪ್ರಶಸ್ತವಾದ ದಿನ. ಶ್ರೀಮನ್ನಾರಾಯಣನೆ ಶ್ರೀಕೃಷ್ಣನಾಗಿ ಮಥುರೆಯಲ್ಲಿ ಅವತರಿಸಿದ ಸುದಿನ. ಉತ್ತರಭಾರತವಿಡೀ ಕೃಷ್ಣನಡೆದಾಡಿದ ದೇಶ. ಹಾಗಾಗಿ ಅವರಿಗಿದು ದೊಡ್ಡ ಉತ್ಸವ. ದಕ್ಷಿಣ ಭಾರತದವರಿಗೂ ಇದು ಮಹೋತ್ಸವ. ಯಾಕೆಂದರೆ, ಕೃಷ್ಣನೆ ತನ್ನ ಪ್ರತಿಮೆಯನ್ನು ರುಕ್ಮಿಣಿಗಾಗಿ ಮಾಡಿಸಿಕೊಟ್ಟಿದ್ದ. ಆ ಪ್ರತಿಮೆಯನ್ನು ಜಗದ್ಗುರು ಮಧ್ವಾಚಾರ್ಯರು ದಕ್ಷಿಣ ಭಾರತದ ಪುಣ್ಯಕ್ಷೇತ್ರ ಉಡುಪಿಯಲ್ಲಿ ಪ್ರತಿಷ್ಠೆ ಮಾಡಿದ್ದಾರೆ ಉಡುಪಿಯಲ್ಲಿ ಕೃಷ್ಣ ನೆಲೆಸಿದ್ದಾನೆ. ಇಡಿಯ ದೇಶದ ಆಗು ಹೋಗುಗಳನ್ನು ನೋಡುತ್ತಿದ್ದಾನೆ ಬಾಲ್ಯದಲ್ಲಿ ದನಗಳ ರಕ್ಷಣೆ ಮಾಡಿ ಗೊಲ್ಲನೆನಿಸಿದ ಕೃಷ್ಣ ದೇಶ ರಕ್ಷಣೆಗಾಗಿ ದಂಡಪಾಣಿಯಾದ. ದುಷ್ಟರೆಲ್ಲರ ಸಂಹಾರದ ಜತೆಗೆ ಶಿಷ್ಟರ ರಕ್ಷಣೆ ಕೃಷ್ಣಾವತಾರದ ಮುಖ್ಯ ಕಾರ್ಯ. ಜೀವನ ಮೌಲ್ಯಗಳನ್ನು ತಿಳಿಸುವ ಭಗವದ್ಗೀತೆಯಂತಹ ಜ್ಞಾನನಿಧಿಯನ್ನೆ ಅರ್ಜುನನ ನಿಮಿತ್ತದಿಂದ ದೇಶಕ್ಕೆ ಕೃಷ್ಣ ನೀಡಿದ. ತಾನು ಕ್ಷರ ಎನಿಸುವ ಜೀವರಿಂದ, ಅಕ್ಷರಳೆನಿಸುವ ಲಕ್ಷ್ಮಿಯಿಂದ ಬೇರೆಯಾಗಿ ಪುರುಷೋತ್ತಮನಾಗಿರುವೆನೆಂದ. ನಾನು ಎಲ್ಲರ ಯೋಗ ಕ್ಷೇಮವನ್ನು ಭರಿಸುವೆನೆಂದು ಕೌರವ - ಪಾಂಡವರ ಯುದ್ಧಾರಂಭದಲ್ಲಿ ಶಂಖನಾದ ಮಾಡಿದ ಕರ್ಮಣ್ಯೇವಾಧಿಕಾರಸ್ತೆ ಎನ್ನುವ ಮೂಲಕ ಸ್ವಾಶ್ರಯೋಚಿತ ಕರ್ಮಾನುಷ್ಠಾನದ ಬಗ್ಗೆ ತಿಳಿಸಿ ಎಲ್ಲರಿಗೂ ಪ್ರಾಮಾಣಿಕವಾಗಿ ದುಡಿಯಿರಿ ದೇವರ ಅನುಗ್ರಹ ಪಡೆ ಯಿರಿ ಎಂದು ಬೋಧಿಸಿದ. ಗೀತೆಯು ಮನುಕುಲಕ್ಕೆ ಮಾಧವನ ಸಂದೇಶ ಸಾಧಕರಿಗೆ ಇದು ಉಪದೇಶ. ಭಕ್ತರಿಗಿದು ಹರಿಯ ಆದೇಶ. ಇಲ್ಲಿ ನರನ ಸಂದೇಹಗಳನ್ನು ನಾರಾಯಣನು ಪರಿಹರಿಸಿ, ತಾನು ಲೋಕೇಶನೆಂಬುದನ್ನು ವಿಶ್ವರೂಪದಲ್ಲಿ ಪ್ರಕಟಿಸಿ ಪಾಂಡವರನ್ನು ನಿಷ್ಕಾಮ ಕರ್ಮದಲ್ಲಿ ತೊಡಗಿಸಿ ವಿಜಯಶಾಲಿಯಾಗಿಸಿ, ಮತ್ತೆ ಈ ದೇಶದಲ್ಲಿ ಧರ್ಮರಾಯ ರಾಜನಾಗುವಂತೆ ಮಾಡಿದ. ಕೃಷ್ಣ ಎಂದೂ ಎಲ್ಲಿಯೂ ಯಾವುದೇ ಸಿಂಹಾಸನವೇರಿ ಮೆರೆದವನಲ್ಲ. ಅವನಿಗೆ ಬೇಕಾದ್ದು ಬರಿಯ ಧರ್ಮಸ್ಥಾಪನೆ, ಧರ್ಮ ರಕ್ಷಣೆ. ಅದಕೆಂದೆ ಆತ ಎಲ್ಲರ ಹೃದಯ ಸಿಂಹಾಸನ ಏರಿ ಕುಳಿತ. ಶ್ರೀಕೃಷ್ಣ ಮತ್ತೆ ಮತ್ತೆ ಅವತರಿಸಲಿ, ಹೃದಯ ಮಂಟಪದಲ್ಲಿ ನಿಲ್ಲಲಿ ದುರುಳತನವನ್ನು ದೂರಮಾಡಲಿ

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ

–ಎಂದಂತೆ ಧರ್ಮ ಮೆರೆಯಲಿ ಅಧರ್ಮ ಮೂಲೆ ಸೇರಲಿ. ಕುಚೇಲನು ನೀಡಿದ ಹಿಡಿ ಅವಲಕ್ಕಿಯನ್ನು ಸ್ವೀಕರಿಸಿ, ಶ್ರೀ ಕೃಷ್ಣನು ಅವನ ಮೇಲೆ ಅಪಾರ ಅನುಗ್ರಹದ ಧಾರೆ ಎರೆಯುವನು. ಇತರ ಯುಗಗಳಲ್ಲಿ ವಿಶೇಷ ಯಜ್ಞ, ಯಾಗ, ತಪಸ್ಸಿಗೆ ನಿಲುಕುವ ಕೃಷ್ಣನು, ಕಲಿಯುಗದಲ್ಲಿ ಕೇವಲ ನಾಮ ಸಂಕೀರ್ತನೆಯಿಂದ ಸಂಪ್ರೀತನಾಗುತ್ತಾನೆ. ಆದ್ದರಿಂದ ನಾವು ಎಷ್ಟು ಮಾತ್ರಕ್ಕೂ ನಿಷ್ಕರ್ಮಕಾಮಿಗಳಾಗದೆ, ಸದೈವ ಕರ್ತವ್ಯಶೀಲರಾಗಿ, ಶ್ರೀಕೃಷ್ಣನನ್ನು ಸ್ಮರಿಸುತ್ತಾ ಸಂಸಾರ ತಾಪತ್ರಯಗಳಿಂದ ಮುಕ್ತರಾಗೋಣ.

ಸರ್ವೇ ಜನಾಃ ಸುಖಿನೋ ಭವಂತು ಸಮಸ್ತ ಸನ್ಮಂಗಲಾನಿ ಭವಂತು
ಕೃಷ್ಣಂ ವಂದೇ ಜಗದ್ಗುರುಮ್ ಕೃಷ್ಣಂ ವಂದೇ ಜಗದ್ಗುರುಮ್







## ಹೃಷಿಕೇಶದಲ್ಲಿ ಬ್ರಹ್ಮೋತ್ಸವ

ತಿರುಪತಿಯ ಬಳಿಯ ನಾರಾಯಣ ವನದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು ನಡೆದ ಹೊತ್ತಿನಲ್ಲಿಯೇ ಹರಿದ್ವಾರದ ಬಳಿಯ ಹೃಷೀಕೇಶದ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿಯೂ ವಾರ್ಷಿಕ ಬ್ರಹ್ಮೋತ್ಸವಗಳು ನಡೆದು ಯಶಸ್ವಿಯಾದವು.

ಉತ್ತರ ಪ್ರದೇಶದಲ್ಲಿ ಗಂಗೆ ಬಯಲನ್ನು ಪ್ರವೇಶಿಸುವ ಹರಿದ್ವಾರದಿಂದ ಹಿಮಾಲಯವನ್ನೇರುವ ರಸ್ತೆಯಲ್ಲಿ ಹರಿದ್ವಾರದಿಂದ ಗಂಟೆಯ ಹಾದಿಯ ಪ್ರಯಾಣ ಹೃಷೀಕೇಶಕ್ಕೆ. ಇದು ಬದರಿ, ಕೇದಾರ, ಗಂಗೋತ್ರಿ ಯಮುನೋತ್ರಿ

# ವಾರ್ತಾಲಹರಿ

ಗಳಿಗೆ ಹೊರಡುವಲ್ಲಿನ ತಳ ಮಟ್ಟದ ಕೊನೆಯ ಬೀಡು ಖ್ಯಾತ ತೀರ್ಥಕ್ಷೇತ್ರ. ಲಕ್ಷ್ಮಣನ ಹೆಸರಿನಲ್ಲಿಯೇ ಅಲ್ಲದೆ ಈಗ ಶ್ರೀರಾಮಚಂದ್ರನ ಹೆಸರಿನಲ್ಲಿಯೂ ಒಂದು ತೂಗುಸೇತುವೆ ಆಗಿದೆ. ಇಲ್ಲಿರುವ ಶ್ರೀ ವೆಂಕಟೇಶ್ವರಸ್ವಾಮಿ ಆಲಯ ದಕ್ಷಿಣ ಭಾರತದ ಪೂಜಾ ವಿಧಿಗಳಿಗೆ ಪ್ರಸಿದ್ಧ. ಅದರ ಅಂಗವಾಗಿಯೇ ವಾರ್ಷಿಕ ಬ್ರಹ್ಮೋತ್ಸವ. ಮೇ ಇಪ್ಪತ್ತಾರರಿಂದ ಜೂನ್ ನಾಲ್ಕರ ವರೆಗೆ ನಡೆಯಿತು. ಅಪಾರ ಸಂಖ್ಯೆಯಲ್ಲಿ ಬದರೀಕೇದಾರ ಯಾತ್ರಿಗಳೂ ಬ್ರಹ್ಮೋತ್ಸವದಲ್ಲಿ ಪಾಲುಗೊಂಡಿದ್ದರು.

ಮೇ ಇಪ್ಪತ್ತಾರರಂದು ಬ್ರಹ್ಮೋತ್ಸವದ ಅಂಕುರಾರ್ಪಣೆ. ದೇವಸೇನಾಪತಿ ವಿಷ್ವಕ್ಸೇನರು ದಿಗ್ದೇ





ವತ್ತಿಗಳನ್ನೂ ಸರ್ವ ದೇವರುಗಳನ್ನೂ ಬ್ರಹ್ಮೋತ್ಸವಕ್ಕೆ ಆಹ್ವಾನಿಸಿ ಬಂದಾದ ಮೇಲೆ ಇಪ್ಪತ್ತೇಳರಂದು ಧ್ವಜಾರೋಹಣ. ನಂತರ ಸ್ವಾಮಿಯ ಊರಮೆರವಣಿಗೆ ದಿನವೂ ವಿವಿಧ ವಾಹನಗಳಲ್ಲಿ ಬೆಳಗು ಸಂಜೆಗಳಲ್ಲಿ ಸ್ವಾಮಿಯ ವಿಜಯೋತ್ಸವ ಭಕ್ತರ ಹೃದಯಾನಂದಕರವಾಗಿ ನಡೆಯಿತು ಗುರುತ್ಮಂತ ವಾಹನದಲ್ಲಿ ಬಹುಜನಪ್ರಿಯವಾದ ಉತ್ಸವ ರಥೋತ್ಸವದಲ್ಲಿ ಪರಿವರ್ತಿತವಾದಾಗ ಸುತ್ತಲ ಮಂದಿಗೆ ಮಹದುತ್ಸಾಹ ಧರ್ಮ ಪ್ರಚಾರ ಪರಿಷತ್ತಿನ ಧಾರ್ಮಿಕೋಪನ್ಯಾಸ, ಸಂಗೀತ ಕಚೇರಿಗಳ ಭಕ್ತಿ ಪ್ರವಚನಗಳು ಗಂಗಾ ಸಲಿಲದಂತೆ ನಿರ್ಮಲವಾಗಿ ಮಂಜುಳವಾಗಿ ಹರಿಯಿತೆಂದು ಭಾಗವಹಿಸಿದ ಭಕ್ತರು ಹೇಳಿದರೆನ್ನಲಾಗಿದೆ.

## ನಾರಾಯಣ ವನದಲ್ಲಿ ಬ್ರಹ್ಮೋತ್ಸವ

ತಿರುಪತಿಯ ಬಳಿಯ ಪುತ್ತೂರಿನ ನಾರಾಯಣವನದಲ್ಲಿನ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಆಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು ಮೇ 26 ರಿಂದ ಜೂನ್ 4 ರ ವರೆಗೆ ನಡೆದು ಯಶಸ್ವಿಯಾದವು.

ಮೊದಲನೆಯದಿನ - ಮೇ 26 ರಂದು ಸೇನಾಪತಿ ಉತ್ಸವ ಅಂಕುರಾರ್ಪಣೆಗಳು ನಡೆದುವು. ಮಾರನೆಯದಿನ ಬೆಳಗ್ಗೆ ಧ್ವಜಾರೋಹಣವಾಯಿತು ಅಂದು ಸಂಜೆ ಸ್ವಾಮಿ ದೊಡ್ಡ ಶೇಷವಾಹನದಲ್ಲಿ ನಾರಾಯಣವನದ ತಿರುವೀಧಿಗಳಲ್ಲಿ ಮರವಣಿಗೆಯಲ್ಲಿ ಬಂದು ಭಕ್ತರನ್ನು ಆನಂದಗೊಳಿಸಿದರು

ಮಾರನೆಯ ದಿನದಿಂದ ದಿವೂ ಬೆಳಗ್ಗೆ ಸಾಯಂಕಾಲಗಳಲ್ಲಿ ದೇವರು ವಿವಿಧ ವಾಹನಗಳನ್ನೇರಿ ಮೆರವಣಿಗೆಯಲ್ಲಿ ಪುರವೀಧಿಗಳಲ್ಲಿ ಬಿಜಮಾಡಿಸಿದರು ಮೇ ಮೂವತ್ತೊಂದರಂದು ಸಂಜೆ ನಡೆದ ಗರುಡವಾಹನ ಹಾಗೂ ಜೂನ್ ಮೂರರಂದು ಬೆಳಗ್ಗೆ ನಡೆದ ರಥೋತ್ಸವದಲ್ಲಿ ಅತ್ಯಂತ ಹೆಚ್ಚಿನ ಮಂದಿ ಸೇರಿದು ಸ್ವಾಮಿಯನ್ನು ದರ್ಶಿಸಿ ಆನಂದಿಸಿದರು

ಜೂನ್ ನಾಲ್ಕರಂದು ಚಕ್ರಸ್ನಾನವಾಗಿ ಧ್ವಜವನ್ನು ಕೆಳಗಿಳಿಸಲಾಯಿತು.

ಈ ಹತ್ತು ದಿನಗಳೂ ಧರ್ಮ ಪ್ರಚಾರ ಪರಿಷತ್ ವತಿಯಿಂದ ಹರಿಕಥೆ, ಧರ್ಮದ ವಿವಿಧ ಹಂತಗಳ ಬಗ್ಗೆ ಉಪನ್ಯಾಸಗಳು, ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರಿಂದ ಸಂಗೀತ ಸಭೆಗಳು ನಡೆದವು. ಆಲಯವನ್ನೂ ಅದರ ಪರಿಸರವನ್ನೂ, ತಿರುವೀಧಿಗಳನ್ನೂ ವಿದ್ಯುದ್ದೀಪಗಳಿಂದಲೂ ಹಸಿರು ತೋರಣಗಳಿಂದಲೂ ಅಲಂಕರಿಸಲಾಗಿದ್ದಿತು

## ಭಾಗವತ ಸಪ್ತಾಹ

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಜೂನ್ 2 ರಿಂದ 8 ರ ವರೆಗೆ ಏಳುದಿನಗಳ ಕಾಲ ಭಾಗವತ ಸಪ್ತಾಹ ನಡೆದು ಯಶಸ್ವಿಯಾಯಿತು. ಅನ್ನಮಾಚಾರ್ಯ ಪ್ರಾಜೆಕ್ಟ್, ಭಾಗವತ ಪ್ರಾಜೆಕ್ಟ್, ತಿರುಪತಿ ವಿಕಾಸ ತರಂಗಿಣಿ, ಜೆ ಇ ಟಿ. ಗಳ ಸಂಯುಕ್ತ ಆಶ್ರಯದಲ್ಲಿ ನಡೆದ ಸಪ್ತಾಹ ಕಾರ್ಯಕ್ರಮವನ್ನು ಅವಧಾನ ಚಕ್ರವರ್ತಿ ಬಿರುದಾಂಕಿತರಾದ ಡಾ|| ಮೇಡಸಾನಿ ಮೋಹನ್ ಅವರು ನಿರ್ವಹಿಸಿಕೊಟ್ಟರು ಆರಂಭ ಕಾರ್ಯಕ್ರಮದಲ್ಲಿ ಪಾಲುಗೊಂಡ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಅವರು ಇಂತಹ ಕಾರ್ಯಕ್ರಮಗಳಿಂದಾಗಿ ಭಕ್ತಿಭಾವ ಪ್ರಸಾರ, ಮಾನವ ಮೌಲ್ಯಗಳ ಪ್ರಸಾರ ಆಗುತ್ತದೆಯೆಂದೂ, ಆ ಮೂಲಕವಾಗಿ ಸಾಮಾಜಿಕ ಅಭಿವೃದ್ಧಿ ಸಾಧ್ಯವೆಂದೂ ಅಭಿಪ್ರಾಯ ವ್ಯಕ್ತಪಡಿಸಿದರು.

ಹೈದರಾಬಾದಿನ ಶ್ರೀ ರಾಮಕೃಷ್ಣಮಠದ ಅಧಿಪತಿ ಶ್ರೀ ಪರಮಾರ್ಥಾನಂದಸ್ವಾಮಿಜೀ ಅವರ ಪ್ರೇರಣೆಯಿಂದಾಗಿ ಮೊದಲಬಾರಿಗೆ ಹೈದರಾಬಾದಿನ ಶ್ರೀರಾಮಕೃಷ್ಣಮಠದಲ್ಲಿ ಭಾಗವತ ಸಪ್ತಾಹ ನಡೆಯಿತೆಂದೂ ನಂತರ ಇದೀಗ ತಿರುಪತಿಯಲ್ಲಿ ನಡೆಸುತ್ತಿರುವುದಾಗಿಯೂ ತಿಳಿಸಿದ ಡಾ|| ಮೇಡಸಾನಿ ಮೋಹನ್ ಅವರು ಪ್ರತಿದಿನ ಸಂಜೆ ಭಾಗವತದ ವಿವಿಧ ಘಟ್ಟಗಳನ್ನು - ನೃಸಿಂಹೋಪಾಖ್ಯಾನ, ಅಂಬರೀಶ ಚರಿತ್ರೆ, ಗಜೇಂದ್ರ ಮೋಕ್ಷ, ವಾಮನಾವತಾರ, ರುಕ್ಮಿಣೀ ಕಲ್ಯಾಣ, ನರಕಾಸುರ ಸಂಹಾರ, ಶ್ರೀಕೃಷ್ಣಲೀಲೆ - ಮುಂತಾದುವನ್ನು ಸ್ವಾರಸ್ಯಕರವಾಗಿ ವಿವರಿಸುತ್ತ ಅಲ್ಲಲ್ಲಿನ ಪದ್ಯಗಳನ್ನು ಉದಾಹರಿಸುತ್ತ - ಶ್ರೋತೃಗಳನ್ನು ಭಕ್ತಿ ಸಾಗರದಲ್ಲಿ ಕೇಲಾಡುವಂತೆ ಮಾಡಿದರು.

ಎಂಟನೆಯ ತಾರೀಖಿನಂದು ಭಾಗವತ ಸಪ್ತಾಹ ಸಮಾರೋಪ. ಅಂದು ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ಅವಧಾನಿಗಳಾದ ಶ್ರೀ ಮೇಡಸಾನಿ ಮೋಹನ್ ಅವರು ಭಾಗವತ ಸಪ್ತಾಹ ಕಾರ್ಯಕ್ರಮ ನಡೆಸಿಕೊಟ್ಟದ್ದನ್ನು ಪ್ರಶಂಸಿಸುತ್ತ ಇಂತಹ ಕಾರ್ಯಕ್ರಮಗಳು ಜನಕ್ಕೆ ಪ್ರಯೋಜನಕರದೇಕೆಂದರೆ ಅವುಗಳ ಸಂಖ್ಯೆ ಹೆಚ್ಚಬೇಕಾಗುತ್ತದೆ ಹಾಗೆ ಮಾಡುವಲ್ಲಿ ಶ್ರೀ ಮೋಹನ್ ಅವರು ಕಾರ್ಯ ತತ್ಪರರಾಗಲಿ ಎಂದು ಹಾರೈಸಿದರು.

ಈ ಕಾರ್ಯಕ್ರಮದಲ್ಲಿ ಬಾಪಟ್ಲ ಆಶ್ರಮದ ಶ್ರೀ ಶ್ರೀ ನಿರ್ವಿಕಲ್ಪಾನಂದಸ್ವಾಮಿಗಳು ಭಾಗವಹಿಸಿ ಆಶೀರ್ವಚನ ನೀಡಿದರು. ವಿಕಾಸ ತರಂಗಿಣಿಯ ಶ್ರೀ ಶ್ರೀನಿವಾಸುಲು ಅವರು ಭಾಗವತ ಸಪ್ತಾಹಕಾರರನ್ನೂ, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರನ್ನೂ ಸನ್ಮಾನಿಸಿದರು ಶ್ರೀ ಸ್ವಾಮಿಜೀ ಅವರನ್ನು ತಿ.ತಿ ದೇ.ಗಳ ಪರವಾಗಿ ಪಿ ಆರ್.ಓ. ಶ್ರೀ ಸುಭಾಷ್ ಗೌಡ್ ಅವರು ಸನ್ಮಾನಿಸಿದರು

## ಶ್ರೀನಿವಾಸ ಕಲ್ಯಾಣ ನಾಟಕ ವಿಜಯೋತ್ಸವ

ಈಚೆಗೆ ಹೈದರಾಬಾದಿನಲ್ಲಿ ನಡೆದ ನಂದಿ ನಾಟಕೋತ್ಸವಗಳಲ್ಲಿ ತಿ. ತಿ. ದೇವಸ್ಥಾನಗಳ ಉದ್ಯೋಗಿಗಳು ಪ್ರದರ್ಶಿಸಿದ ಶ್ರೀನಿವಾಸ ಕಲ್ಯಾಣ ನಾಟಕವು ಪ್ರಥಮ ಬಹುಮಾನವಾದ ಬಂಗಾರದ ನಂದಿ ಪ್ರಶಸ್ತಿಯನ್ನು ಪಡೆದ ಸಂದರ್ಭವನ್ನು ಪುರಸ್ಕರಿಸಿ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಜೂನ್ 15 ರಂದು ವಿಜಯೋತ್ಸವವನ್ನು ಆಚರಿಸಲಾಯಿತು.

ತಿ.ತಿ.ದೇ. ಉದ್ಯೋಗಿ ಸಂಘದ ನಾಯಕರೂ ನಾಟಕ ಸಂಘದ ನೇತಾರರೂ ಆದ ಶ್ರೀ ಚಿನ್ನಂಗಾರಿ ರಮಣ ಸಭೆಯನ್ನು ಆಹ್ವಾನಿಸಿದರು. ಮುಖ್ಯ ಅತಿಥಿಯಾಗಿ ಆಗಮಿಸಿದ ಡಾ|| ಐ ವಿ ಸುಬ್ಬಾರಾವು ಅವರು - ಶ್ರೀನಿವಾಸ ಕಲ್ಯಾಣವನ್ನು ವಿಜಯವಂತವಾಗಿ ಪ್ರದರ್ಶಿಸಿ ಪ್ರಶಸ್ತಿಯನ್ನು ಪಡೆದಿರುವುದು ತಿ. ತಿ. ದೇವಸ್ಥಾನಗಳಿಗೆ ಗರ್ವಕಾರಣವೆಂದು, ಈ ವಿಜಯವು ವಿಜಯ ಪರಂಪರೆಯನ್ನುಂಟು ಮಾಡಲಿ ಎಂದು ಹಾರೈಸಿದರು

ಅಧ್ಯಕ್ಷತೆ ವಹಿಸಿದ ಡಾ|| ಮೇಡಸಾನಿ ಮೋಹನ್ ಅವರು ಈ ನಾಟಕವನ್ನು ಎಲ್ಲ ರಾಜ್ಯಗಳಲ್ಲಿಯೂ ಪ್ರದರ್ಶಿಸುವುದರ ಮೂಲಕ ಧರ್ಮ ಪ್ರಸಾರ ಸಾಧ್ಯವಿದೆ ಎಂದರು.



ಅತಿಥಿಗಳಾಗಿ ಆಗಮಿಸಿದ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ರಾಮಕೃಷ್ಣಯ್ಯನವರು ಮಾತನಾಡುತ್ತ ಉದ್ಯೋಗಿಗಳು ಯಾತ್ರಿಕೋಪಯೋಗಿ ಸೇವೆ ಸಲ್ಲಿಸುತ್ತಿರುವ ಸಮಯದಲ್ಲಿಯೇ ಇಂತಹ ಆಧ್ಯಾತ್ಮಿಕ ಅಭಿವೃದ್ಧಿಯ ಕಾರ್ಯಕ್ರಮದಲ್ಲಿ ಪಾಲುಗೊಂಡು ಪ್ರಶಸ್ತಿಯನ್ನು ಪಡೆದಿರುವುದು ಪ್ರಶಂಸೆಗೆ ಅರ್ಹವಾಗಿದೆಯೆಂದರು. ನಾಟಕದ ಕರ್ತೃ ಶ್ರೀ ವಕ್ಕಂತಂ ಸೂರ್ಯನಾರಾಯಣರಾವ್, ನಾಟಕ ಸಾರಥ್ಯ ವಹಿಸಿದ ಶ್ರೀ ಚೆನ್ನಂಗಾರಿ ರಮಣ, ನಾಟಕ ನಿರ್ದೇಶಕ ಶ್ರೀ ವಿ. ಕೋಟೇಶ್ವರರಾವು ಅವರುಗಳನ್ನು ಅಭಿನಂದಿಸಿದರು. ತಿರುಪತಿ ಎಂ. ಎಲ್. ಎ. ಶ್ರೀ ಎ. ಮೋಹನ್ ಅವರು ಮಾತನಾಡುತ್ತ ತಿ.ತಿ.ದೇ. ಉದ್ಯೋಗಿಗಳು ಬಂಗಾರದ ನಂದಿ ಪ್ರಶಸ್ತಿಯನ್ನು ಪಡೆದಿರುವುದು ಅವರ ಆಧ್ಯಾತ್ಮಿಕ ತೃಷೆಗೆ, ನಾಟಕ ಕೌಶಲಕ್ಕೆ ಸ್ಪರ್ಧಾ ಮನೋಭಾವಕ್ಕೆ ಹಿಡಿದ ಕನ್ನಡಿಯೆಂದು ಹೊಗಳಿದರು.

ಡಾ|| ಐ. ವಿ. ಸುಬ್ಬಾರಾವು ಅವರು ನಾಟಕದ ಎಲ್ಲ ಕಲಾವಿದರಿಗೆ ಜ್ಞಾಪಿಕೆಗಳನ್ನು ನೀಡಿ ಸನ್ಮಾನಿಸಿದರು.

ನಿನ್ನ ಮಹಿಮೆಯನಾರು ಬಲ್ಲರು
ಚಿನ್ಮಯಾತ್ಮಕನಂತ ರೂಪನೆ
ಮುನ್ನ ಕಮಲಜ ನಿನ್ನ ನಾಭಿಯೊಳುನ್ನತೋನ್ನತದಿ
ಘನ್ನ ತಪವಂಗೈದು ಕಾಣನು
ಇನ್ನು ಶ್ರುತಿಸ್ಮೃತಿಯರಸಿ ಅರಿಯವು
ಪನ್ನಗೇಂದ್ರನು ಪೊಗಳಲರಿಯ ಪ್ರಸನ್ನವೆಂಕಟನೆ

## ತಿರುಚಾನೂರಿನಲ್ಲಿ ನಿತ್ಯಾನ್ನ ಪ್ರಸಾದ ಯೋಜನೆ

ಜೂನ್ ತಿಂಗಳ 18 ನೇ ದಿನಾಂಕ ಶುಕ್ರವಾರ ಬೆಳಗ್ಗೆ ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ನಿತ್ಯಾನ್ನ ಪ್ರಸಾದ ಯೋಜನೆಯನ್ನು ಆರಂಭಿಸಲಾಯಿತು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ. ವಿ. ಸುಬ್ಬಾರಾವು ಅವರು ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರನ್ನು ಸಂದರ್ಶಿಸಿದ ಯಾತ್ರಿಕರಿಗೆ ಅನ್ನ ಪ್ರಸಾದ ವಿತರಣೆ ಮಾಡುವ ಮೂಲಕ ಈ ಯೋಜನೆಯನ್ನು ಆರಂಭಿಸಿದರು ಪ್ರತಿ ದಿನವೂ ಸುಮಾರು ಎಂಟು ಸಾವಿರ ಮಂದಿಗೂ, ಪ್ರತಿ ಶುಕ್ರವಾರಗಳಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಮಂದಿಗೆ ಉಚಿತವಾಗಿ ಅನ್ನ ಪ್ರಸಾದಗಳನ್ನು ವಿತರಿಸಲಾಗುವುದು ಎಂದು ನುಡಿಯುತ್ತ ಇದಕ್ಕೆ ಅಗತ್ಯವಾದ ಧನವನ್ನು ವಂತಿಗೆಗಳ ಮೂಲಕ ಕ್ರೋಢೀಕರಿಸಲಾಗುವುದು ಎಂದರು. ಐವತ್ತು ಸಾವಿರ ರೂಪಾಯಿಗಳನ್ನು ನೀಡಿದ ದಾತರ ಗೋತ್ರನಾಮಗಳನ್ನು ಐದುವರ್ಷ ಕಾಲ ಆಲಯದಲ್ಲಿ ಹೇಳಲಾಗುವುದೆಂದು ಅವರು ತಿಳಿಸಿದರು. ಅವರಿಗೆ ಐದು ವರ್ಷ ವರ್ಷಕ್ಕೆ ಒಮ್ಮೆ ಶ್ರೀ ಪದ್ಮಾವತೀ ಅಮ್ಮನವರ ಪ್ರತ್ಯೇಕ ದರ್ಶನವನ್ನು ಏರ್ಪಡಿಸಿ, ಮೊದಲಬಾರಿಗೆ ದರ್ಶನಕ್ಕೆ ಬಂದಾಗ ವಸ್ತ್ರ ಬಹುಮಾನ ನೀಡುವುದಾಗಿ ತಿಳಿಸಿದರು. ಈ ನಿತ್ಯ ಅನ್ನ ಪ್ರಸಾದ ಯೋಜನೆಯನ್ನು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯ ಶ್ರೀ ಕೋದಂಡ ರಾಮಸ್ವಾಮಿ ಆಲಯ ಹಾಗೂ ಕಪಿಲತೀರ್ಥಗಳಿಗೂ ವಿಸ್ತರಿಸುವ ಯೋಜನೆಯಿದೆಯೆಂದರು.

ಈ ಸಮಾರಂಭದಲ್ಲಿ ತಿ.ತಿ ದೇ. ಜೆ.ಇ.ಓ. ಶ್ರೀ ರಾಮಕೃಷ್ಣಯ್ಯ, ಡೆ.ಇ.ಓ. ಶ್ರೀ ಲಕ್ಷ್ಮೀಪತಿ, ಎ.ಇ.ಓ. ಶ್ರೀ ಭಕ್ತವತ್ಸಲಂ - ಮೊದಲಾದವರು ಭಾಗವಹಿಸಿದ್ದರು.



## ತಿ.ತಿ.ದೇ.
## ಸಿಬ್ಬಂದಿ ಶಿಕ್ಷಣ ಶಿಬಿರ

ತಿರುಮಲ ತಿರುಪತಿ ದೇವಸ್ಥಾನಗಳ ಸಿಬ್ಬಂ ದಿಗೆ ಯಾತ್ರಿಕ ಸಂಬಂಧಗಳು, ಆಡಳಿತ ವಿವರಗ ಳಲ್ಲಿ - ಆಧುನಿಕ ಅಂಶಗಳನ್ನು ಹೆಚ್ಚಿನ ಹೊಂದಾ ಣಿಕೆಯನ್ನು ಉಂಟುಮಾಡುವ ಉದ್ದೇಶದಿಂದ ಹೈದರಾಬಾದಿನ ಮರ್ರಿ ಚೆನ್ನಾರೆಡ್ಡಿ ಮಾನವ ಸಂಪನ್ಮೂಲಗಳ ಅಭಿವೃದ್ಧಿ ಸಂಸ್ಥೆಯವರ ನೆರ ವಿನಿಂದ ಮೂರುದಿನದ ಶಿಕ್ಷಣ ಶಿಬಿರವನ್ನು ತಿ.ತಿ.ದೇ. ಪರಿಪಾಲನಾಭವನದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ. ಸುಬ್ಬಾ ರಾವು ಅವರು 22-6-99 ರಂದು ಬೆಳಗ್ಗೆ ಉದ್ಘಾ ಟಿಸಿದರು.

ಆಧುನಿಕತಂತ್ರಜ್ಞಾನದ ನೆರವಿನಿಂದ ಆರ್ಷೇಯ ಮೌಲ್ಯಗಳಾದ ಸೇವಾ ಮನೋಭಾವ, ಉದಾತ್ತ ಮಾನವೀಯತೆಗಳನ್ನು ರೂಢಿಸಿಕೊಂಡು ವ್ಯಷ್ಟಿ ಹಾಗೂ ಸಮಷ್ಟಿಯ ಅಭಿ ವೃದ್ಧಿಯಲ್ಲಿ ತೊಡಗಿಸಿಕೊಳ್ಳುವುದೇ ಜೀವನದ ಲಕ್ಷ್ಯವಾಗಬೇಕೆಂದೂ, ಅದರ ಸಾಧನೆಯ ಪಥ ದಲ್ಲಿ ಇಂತಹ ಶಿಕ್ಷಣಶಿಬಿರಗಳು ದೋಹದಕಾ ರಿಯೆಂದೂ, ಕಾರ್ಯನಿರ್ವಹಣಾಧಿಕಾರಿ ನುಡಿ ದರು.

ಅಭಿವೃದ್ಧಿ ಸಂಸ್ಥೆಯ ವತಿಯಿಂದ ಸರ್ವಶ್ರೀ ಸಿ ವಿ ಶಿವಪ್ರಸಾದ್, ಕೇಶವಮೂರ್ತಿ, ಪ್ರಕಾಶ ರಾವ್ ಮೊದಲಾದವರೂ, ತಿ.ತಿ.ದೇ. ಡೆ.ಇ.ಓ (ಸರ್ವೀಸಸ್) ಶ್ರೀ ಎಲ್. ಕೃಷ್ಣಾರೆಡ್ಡಿ, ಪೌರಸಂ ಬಂಧಾಧಿಕಾರಿ ಶ್ರೀ ಸುಭಾಷ್ ಗೌಡ್ ಮೊದ ಲಾದ ತಿ.ತಿ.ದೇ ಅಧಿಕಾರಿಗಳು, ಸಿಬ್ಬಂದಿ ಶಿಕ್ಷಣ ಶಿಬಿರದಲ್ಲಿ ಪಾಲುಗೊಂಡು ದಿಶಾನಿರ್ದೇಶನ ನೀಡಿದರು.



## 'ಸರಸಭಾರತೀ ವಿಲಾಸದ' ಆಂಗ್ಲಾನುವಾದದ ಬಿಡುಗಡೆ

ಉಡುಪಿಯ ಶ್ರೀಕೃಷ್ಣಮಠದ ವಸಂತಮಹ ಲಿನಲ್ಲಿ ಏಪ್ರಿಲ್ 25 ರ ಪವಿತ್ರ ಸಂಜೆ 6 ಗಂಟೆಗೆ ಪರ್ಯಾಯ ಶ್ರೀ ಕಾಣಿಯೂರು ಮಠದ ಶ್ರೀ ವಿದ್ಯಾವಲ್ಲಭ ತೀರ್ಥರು, ಯತಿರಾಜ ವಾದಿ ರಾಜ ಸ್ವಾಮಿಗಳು, 500 ವರ್ಷಗಳ ಹಿಂದೆ ಸಂಸ್ಕೃತದಲ್ಲಿ ರಚಿಸಿದ ವೇದಾರ್ಥ ನಿರ್ಣಾಯಕ ಗ್ರಂಥವಾದ, 'ಸರಸಭಾರತೀ ವಿಲಾಸದ' ಆಂಗ್ಲಾ ನುವಾದವನ್ನು ಇತರ ಅಷ್ಟಮಠಾಧೀಶರಾದ ಶ್ರೀಕೃಷ್ಣಾಪುರಮಠದ ಶ್ರೀ ವಿದ್ಯಾಸಾಗರತೀರ್ಥರು ಹಾಗೂ ಶ್ರೀ ಪೇಜಾವರಮಠದ ವಿಶ್ವಪ್ರಸನ್ನತೀ ರ್ಥರ ಸಮ್ಮುಖದಲ್ಲಿ ಬಿಡುಗಡೆಗೊಳಿಸಿ ಶ್ರೀಕೃಷ್ಣ ಪ್ರಭುವಿನ ಚರಣಗಳಲ್ಲಿ ಅರ್ಪಿಸಿದರು. ಸರಸ ಭಾರತೀ ವಿಲಾಸದ ಆಂಗ್ಲಾನುವಾದವನ್ನು ತಿರು ಮಲ ತಿರುಪತಿ ದೇವಸ್ಥಾನಗಳ ಧಾರ್ಮಿಕಗ್ರಂಥ ಪ್ರಕಟಣಾವಿಭಾಗದ ದತ್ತಿನಿಧಿಯಿಂದ ಉಡು ಪಿಯ ಎಸ್ ಕೆ. ಆಚಾರ್ಯರು ಸಿದ್ಧಪಡಿಸಿದ್ದರು.

ವೇದಿಕೆಯ ಮೇಲಿದ್ದ ಯತಿತ್ರಯರಾದ, ಶ್ರೀಕೃ ಷ್ಣಾಪುರ, ಪೇಜಾವರ (ಕಿರಿಯ) ಹಾಗೂ ಪರ್ಯಾಯ ಕಾಣಿಯೂರು ಶ್ರೀಪಾದರು, ಹರ ಸಾಹಸ, ಶ್ರಮ ಹಾಗೂ ಶ್ರದ್ಧೆಯಿಂದ ಲೋಕೇಶ ವೆಂಕಟೇಶನ ಕೃಪಾಶೀರ್ವಾದ ಹಾಗೂ, ಧನಸ ಹಾಯದಿಂದ, 'ಸರಸಭಾರತಿಯ' ಆಂಗ್ಲಾನುವಾ ದವನ್ನು ಸಿದ್ಧಪಡಿಸಿ ಶ್ರೀನಿವಾಸನ ಕಲ್ಯಾಣದ ದಿನ ವಾದ ವೈಶಾಖ ಶುದ್ಧ ದಶಮಿಯಂದು ಅರ್ಪಿ ಸಿದ್ದು ತುಂಬಾ ವಿಶೇಷ ಎಂದರಲ್ಲದೆ, ಇಂತಹ ಜ್ಞಾನಸತ್ರ, ನಿರಂತರ ಆಚಾರ್ಯರ ಮೂಲಕ ಮುಂದುವರಿಯಲಿ ಎಂದರು. ಆ ಬಳಿಕ ಏಪ್ರಿಲ್ ತಾ|| 15 ರಿಂದ 2 5 ರ ವರೆಗೆ ಪ್ರವಚನಮಾ ಲಿಕೆ ನಡೆಸಿದ ವಿದ್ವಾಂಸರಾದ ಶ್ರೀ ಸಗ್ರಿರಾಘ ವೇಂದ್ರ ಉಪಾಧ್ಯ, ಶ್ರೀ ರಾಘವೇಂದ್ರ ಪುರಾಣಿಕ, ಚೆಪ್ಪಗಿರಿ ನಾಗೇಂದ್ರ ಆಚಾರ್ಯ, ಹಾಗೂ ಪುಸ್ತಕ ವನ್ನು ಮುದ್ರಣ ಮಾಡಿದ, ಅಂಬಲ ಪಾಡಿಯ ಅಶೋಕ ಪ್ರಿಂಟರ್ಸ್‌ನ ಮಾಲಿಕರಾದ, ಶ್ರೀ ಸುಂದರ ಶೆಟ್ಟರನ್ನು ಜೋಡು ವಸ್ತ್ರ ಫಲಮಂತ್ರಾ ಕ್ಷತೆ ನೀಡಿ, ಪರ್ಯಾಯ ವಿದ್ಯಾವಲ್ಲಭತೀರ್ಥರು ಹರಸಿದರು



### ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

**ಒಂದು ವಿನಂತಿ;**

ಸಸಿಯೊಂದ ಬೆಳೆವವನು ದೇವರಾ ಸೇವಕನು
ತಲೆಮಾರು ಗಳಿಗೆಲ್ಲ ನೆರಳನವ ಹರಿಸುವನು
ಹರಸುವರು ಜನರವನ, ಅವನೆಂದು ಕಾಣದರು

ತಿರುಮಲೆಯ ಪವಿತ್ರವಾದ ಅರಣ್ಯ ಶ್ರೀ ವೆಂಕಟೇಶ್ವರಸ್ವಾಮಿಯು ಮಾನವ ಜನಾಂಗಕ್ಕೆ ನೀಡಿದ ಅಮೂಲ್ಯ ವರದಾನ. ಈ ಒಂದು ಸೂಕ್ಷ್ಮವೂ ಸುಂದರವೂ ಆದ ಅರಣ್ಯ ಪರಿಸರ ರಕ್ಷಣೆ ಮಾಡಲೆಂದು ತಿರುಮಲೆ - ತಿರುಪತಿ ದೇವಸ್ಥಾನಗಳವರು ಉತ್ತಮವಾದ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾರೆ ಈ ವನಾಭಿವೃದ್ಧಿಯೋಜನೆಯ ಹಲವು ವಿವರಗಳು ಹೀಗೆ ಇವೆ.

## ವೃಕ್ಷ ಸಂವರ್ಧನೆ

ಈ ಯೋಜನೆಯನ್ವಯ ಪವಿತ್ರವಾದ ಸಪ್ತಗಿರಿಗಳಲ್ಲಿ ಐದುನೂರು ಗಿಡಗಳನ್ನು ನೆಡಲಾಗುವುದು

ಪ್ರಯೋಜನಗಳು
* ಗಿಡಗಳ ಈ ತೋಪಿಗೆ ದಾನಿಯು ಅಪೇಕ್ಷಿಸಿದ ಹೆಸರನ್ನಿಡಲಾಗುವುದು.
* ಗಿಡಗಳನ್ನು ಐದುವರ್ಷಗಳ ವರೆಗೆ ಆರೈಕೆ ಮಾಡಿ ನೋಡಿಕೊಳ್ಳಲಾಗುವುದು
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 25000.**

## ವೃಕ್ಷ ಪ್ರಸಾದ

ಈ ಯೋಜನೆಯನ್ವಯ ತಿರುಮಲೆಯಲ್ಲಿ ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಗಿಡಗಳನ್ನು ಬೆಳೆಸಲಾಗುವುದು

ಪ್ರಯೋಜನಗಳು
* ಪ್ರತಿವರ್ಷ ದಾನಿಯ ಹೆಸರಿನಲ್ಲಿ ನೂರು ಹೂ ಹಣ್ಣು ಬೆಳೆಯುವ ಗಿಡಗಳನ್ನು ವಿತರಿಸುವುದು.
* ಹತ್ತು ವರ್ಷಗಳವರೆಗೆ ಪ್ರತಿವರ್ಷ ಹಂಚುವಿಕ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 15000.**

## ಸ್ಮಾರಕ ವನಗಳು

ಈ ಯೋಜನೆಯಡಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಸಪ್ತಗಿರಿಗಳಲ್ಲಿ ಯಾವುದಾದರೂ ಓಂದು ಜಾತಿಯ ಹತ್ತು ಗಿಡಗಳನ್ನು ಒಂದು ಕಡೆ ನೆಟ್ಟು ಐದು ವರ್ಷ ಬೆಳೆಸಲಾಗುವುದು

ಪ್ರಯೋಜನಗಳು
* ತೋಪಿಗೆ ದಾನಿಯ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದು ವರ್ಷ ಆರೈಕೆಯಿಂದ ನೋಡಿಕೊಳ್ಳಲಾಗುವುದು
* ಈ ಮೊತ್ತದ ದಾನವು ನೂರು ಶತಾಂಶ ಆದಾಯಕರ ಮುಕ್ತ

ದಾನದ ಮೊಬಲಗು **ರೂ. 5000.**

## ವನ ಸಂರಕ್ಷಣ ಭಾಗಸ್ವಾಮ್ಯ

ತಿರುಮಲೆಯ ಅರಣ್ಯಾಚ್ಛಾದನೆಯನ್ನು ರಕ್ಷಿಸಿ ಬೆಳಸುವ ಯೋಜನಯಿದು

ಪ್ರಯೋಜನಗಳು
* ದಾನಿಯ ಹೆಸರಿನ ಪ್ರಕಟನೆ
* ನೂರು ಶತಾಂಶ ಆದಾಯಕರ ಮುಕ್ತದಾದದ್ದು ಈ ದಾನ

ದಾನದ ಮೊಬಲಗು . **ರೂ. 2000.**

ತಮ್ಮ ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ - ಇವರ ಹೆಸರಿಗೆ ಡಿ ಡಿ. ಯ ರೂಪದಲ್ಲಿ ಕಳುಹಿಸಿ.

**ಕಾರ್ಯನಿರ್ವಹಣಾಧಿಕಾರಿ.**



# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

**ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ. ಟಿ. ರಸ್ತೆ, ತಿರುಪತಿ, (ಆಂ.ಪ್ರ.),**

**(ನೋಂದಣಿ ಸಂಖ್ಯೆ - 18/94)**

**ಡಾ|| ಐ. ವಿ. ಸುಬ್ಬಾರಾವ್**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ದಾನಿಗಳೆ;

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ. ನಮ್ಮದೇಶದಲ್ಲಿ ಅಗತ್ಯವಿದ್ದವರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದಲೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ. ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ.

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ. ತಿ ದೇವಸ್ಥಾನಗಳಿಂದ ಆರಂಭವಾಯಿತು. ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾತರ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ.

## ಈ ಯೋಜನೆಯ ವಿವರಗಳು

I ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದುಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು

1 ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು

2 ಸ್ವಾಮಿಯ ಓಲಗದಲ್ಲಿ ದಾನಿಗಳ ಗೋತ್ರವನ್ನು, ಹೆಸರನ್ನು ಆವರ್ತನ ಪದ್ಧತಿಯಲ್ಲಿ ಹೇಳಲಾಗುವುದು

3 ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು.

4\. ಈ ಮೂರು ದಿನಗಳಲ್ಲಿಯೂ, ದಾನಿಯ ಐದುಮಂದಿಗೆ ಉಚಿತವಾಗಿ ಆರತಿ ಸಹಿತ ದರ್ಶನವನ್ನು ಏರ್ಪಡಿಸಲಾಗುವುದು.

5 ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಜ್ಞಾಪಿಕೆಯನ್ನು ನೀಡಲಾಗುವುದು.

6 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ.

ದಾನಿಯು ನೀಡುವ ಹಣಕ್ಕೆ ಸಮನಾದ ಹಣವನ್ನು ತಿ.ತಿ.ದೇ. ತಮ್ಮವತಿಯಿಂದ ಸೇರಿಸಿ ಇಡೀ ಮೊತ್ತವನ್ನು ಬ್ಯಾಂಕಿನಲ್ಲಿ ಠೇವಣಿಯಾಗಿಟ್ಟು ಅದರ ಮೇಲಿನ ಬಡ್ಡಿ ಹಣವನ್ನು ಮಾತ್ರವೇ ಪ್ರತಿನಿತ್ಯ 15,000 ಮಂದಿಗೆ ಉಚಿತ ಭೋಜನ ನೀಡಲು ಬಳಸಲಾಗುವುದು

II ಎಸ್.ವಿ ನಿತ್ಯಾನ್ನದಾನಯೋಜನೆ ತಮ್ಮವಂತಿಗೆಯಾಗಿ ಒಂದುಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ.) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಿರಿ

## ದಾನಗಳನ್ನು ಹೇಗೆ ಕಳುಹಿಸಬೇಕು :

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ.ಡಿ ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ, ಆಂಧ್ರಪ್ರದೇಶ. ಇವರಿಗೆ ಕಳುಹಿಸಬೇಕು

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ

ಕಾರ್ಯನಿರ್ವಹಣಾಧಿಕಾರಿ,

ತಿ ತಿ. ದೇ ಪರಿಪಾಲನಾಭವನ - ತಿರುಪತಿ - 517 501

ನಿತ್ಯಾನ್ನದಾನ ಯೋಜನೆಯಲ್ಲಿ ಭಾಗವಹಿಸಿರಿ

ಉತ್ತಮ ಉನ್ನತ ಸೇವೆಯಲ್ಲಿ ಪಾಲುದಾರರಾಗಿರಿ

